*-print from the Vrithanta Chintamani.*

# SPEECH OF H. H. THE GAEKWAR OF BARODA

elivered at Calcutta Industrial Conference

December 1906.

ಕಲ್ಕತ್ತಾ

ಕೈಗಾರಿಕೆಯ ಸಂಘ.

---

ಬರೋಡಾ ಮಹಾರಾಜ

ಶ್ರೀಮನ್ ಗಾಯಕ್‌ವಾಡೀ ಮಹಾರಾಜರವರ

# ಉಪನ್ಯಾಸ.

---

ಎಂ. ವೆಂಕಟಕೃಷ್ಣಯ್ಯನವರಿಂದ ಕನ್ನಡಿಸಲ್ಪಟ್ಟದ್ದು.

1907.

PRINTED AT THE VANIVILAS PRESS

MYSORE.

## ಎರಡನೇ ಕೈಗಾರಿಕೆಯ ಕಾನ್ಫರೆನ್ಸ್.

ಕಳೆದ ತಿಂಗಳು ೨೯ನೇ ತಾರೀಖಿನಲ್ಲಿ ಈ ಸಭೆಯು ಉಪಕ್ರಮವಾಯಿತು. ಬರೋಡಾ ಸಂಸ್ಥಾನದ ಗಯಕ್ವಾಡ್ ಮಹಾರಾಜರವರು, ಕೈಗಾರಿಕೆ ಕೆಲಸಗಳಿಗೆ ಸಂಬಂಧಪಟ್ಟ ಒಂದು ಉಪನ್ಯಾಸವನ್ನು ಮಾಡಿದರು. ಈ ಸಭೆಗೆ ಅನೇಕ ಸಾವಿರ ಜನ ದೊಡ್ಡಮನುಷ್ಯರೂ ಮತ್ತು ಆರ್ಯಮಹಿಳಾಶಿರೋಮಣಿಗಳೂ ದಯಮಾಡಿಸಿದ್ದರು.



ಬರೋಡಾ ಸಂಸ್ಥಾನದ ಗಯಕ್ವಾರ್ ಮಹಾರಾಜರವರು

ಅಪ್ಪಣೆಕೊಡಿಸಿದ್ದೇನೆಂದರೆ:—

ಯೂರೋಪ್ ಮತ್ತು ಅಮೇರಿಕಾಖಂಡಗಳಲ್ಲಿ ಸಂಚಾರವನ್ನು ಮಾಡಿಕೊಂಡು ನಾನು ದೇಶಕ್ಕೆ ಬಂದು ಸುಮಾರು ಒಂದು ತಿಂಗಳಾಯಿತು. ನಾನು ಬಂದಕೂಡಲೇ ಈ ಸಭೆಯಲ್ಲಿ ಉಪನ್ಯಾಸಮಾಡಬೇಕೆಂದು ಈಸಭೆಯ ಸೆಕ್ರೆಟರಿಗಳಾದ ರಾವ್ ಬಹದ್ದೂರ್ ಮಧೋ

ಲ್ಕರ್‌ರವರು ನನ್ನನ್ನು ಕೇಳಿದರು. ರಾಜ್ಯಭಾರದ ಗಲಾಟೆಗಳು ತುಂಬಾ ಇರುವದರಿಂದಲೂ, ಇಂಥಾ ಉಪನ್ಯಾಸವನ್ನು ಮಾಡುವದಕ್ಕೆ ನನಗಿಂತಲೂ ಸಮರ್ಥರಾದವರು ಇನ್ನೂ ಅನೇಕರಿರುವದರಿಂದಲೂ ಈ ಕೆಲಸವನ್ನು ತಪ್ಪಿಸಿಕೊಳ್ಳಬೇಕೆಂದು ನಾನು ಪ್ರಯತ್ನಮಾಡಿದೆನು ನನ್ನ ಪ್ರಯತ್ನವು ಸಾಗಲಿಲ್ಲ. ಈ ವತ್ತಿನ ದಿನ ಉಪನ್ಯಾಸಮಾಡುವ ಕೆಲಸವನ್ನು ನಾನು ಅಂಗೀಕರಿಸಬೇಕಾಯಿತು. ಇದು ನಮಗೆಲ್ಲರಿಗೂ ಸಮನಾಗಿ ಕರ್ತವ್ಯವಾದದ್ದು. ಇದನ್ನು ತಪ್ಪಿಸಿಕೊಳ್ಳುವದು ಯೋಗ್ಯವಲ್ಲ. ನಾವೆಲ್ಲರೂ ಈ ಸಭೆಯ ಪ್ರಯತ್ನವನ್ನು ನೆರವೇರಿಸುವದರಲ್ಲಿ ಸಮನಾಗಿ ಕೆಲಸಮಾಡಿ ಫಲಾನುಭವದಲ್ಲಿಯೂ ಸಮಭಾಗಿಗಳಾಗೋಣ. ಕೈಗಾರಿಕೆಯ ಕೆಲಸದಲ್ಲಿಯೂ, ಸಂಘ ಸಂಸ್ಕರಣದ ವಿಷಯದಲ್ಲಿಯೂ ರಾಜತಂತ್ರಗಳ ವಿಷಯದಲ್ಲಿಯೂ, ನಮ್ಮ ದೇಶವು ಅಭಿವೃದ್ಧಿಗೆ ಬರತಕ್ಕ ಕೆಲಸಗಳಲ್ಲಿಯೂ ಯಾವದು ಮಾಡಲ್ಪಟ್ಟಾಗ್ಯೂ ಅದರ ಫಲಕ್ಕೆ ನಾವೆಲ್ಲರೂ ಸಮಭಾಗಿಗಳಷ್ಟೆ. ಪ್ರವಾಹಕ್ಕೆ ಅಣೇಕಟ್ಟೆಯನ್ನು ಹಾಕಿ ಜಮೀನುಗಳಿಗೆ ನೀರು ಲಭ್ಯವಾಗುವಂತೆ ಮಾಡಿಕೊಂಡು ಆ ಕಟ್ಟೆಯ ಕೆಳಗಣ ಜಮೀನುದಾರರೆಲ್ಲರೂ ನೀರಿನ ಫಲವನ್ನು ಹೇಗೆ ಅನುಭವಿಸುವರೋ ಹಾಗೆಯೇ ನಮ್ಮ ದೇಶದಲ್ಲಿ ಕೈಗಾರಿಕೆ ಮೊದಲಾದ ವೃತ್ತಿಗಳು ಶಾಸ್ತ್ರಶಕ್ತಿಯ ಬಲದಿಂದ ದೇಶಾಂತರಗಳಲ್ಲಿ ಹೇಗೋ ಹಾಗೆ ವೃದ್ಧಿಗೆ ಬರುವಂತೆ ಮಾಡಿಕೊಂಡರೆ ನಾವು ಅದರ ಫಲವನ್ನು ಸಮನಾಗಿ ಅನುಭವಿಸುವೆವು.

ಪೂರ್ವಕಾಲದಲ್ಲಿ ಇಂಡಿಯಾದೇಶದ ಅರಳೆ ಬಟ್ಟೆಗಳು ಬಹಳ ಪ್ರಸಿದ್ಧವಾಗಿದ್ದವು. ಈ ಬಟ್ಟೆಗಳು ಅಸೀರಿಯಾ ಮತ್ತು ಬ್ಯಾಬಿಲನ್ ಪಟ್ಟಣಗಳಿಗೂ ರಫ್ತಾಗುತ್ತಿದ್ದವು. ಇಂಡಿಯಾ ದೇಶದ ನೀಲಿಯು ಅನೇಕ ಸಾವಿರ ವರುಷಗಳ ಕೆಳಗೆ ಸೇರಲ್ಪಟ್ಟು ಈಗಲೂ ಈಜಿಪ್ಟ್ ದೇಶದ ಗೋಪುರಗಳಲ್ಲಿ ಕಾಣಲ್ಪಡತಕ್ಕ ಈಜಿಪ್ಟ್ ದೇಶದ ಶವಗಳಿಗೆ ಸುತ್ತಿರತಕ್ಕ ಬಟ್ಟೆಗಳಲ್ಲಿ ಕಾಣಲ್ಪಡುವದು. ಇಂಡಿಯಾದೇಶದ ದಂತವು ಪೂರ್ವದ ಈಜಿಪ್ಟ್ ದೇಶಕ್ಕೆ ರಫ್ತಾದ ಅನೇಕ ಪದಾರ್ಥರೂಪವಾಗಿ ಈಗಲೂ ಸಿಕ್ಕುವವು. ಫಿನೀಷಿಯಾದೇಶದವರು ವ್ಯಾಪಾರಾರ್ಥವಾಗಿ ಈ ದೇಶಕ್ಕೆ ಬಂದು ಇಲ್ಲಿ ತಯಾರಾಗುತ್ತಲಿದ್ದ ಅನೇಕ ವಿಧವಾದ ಜವಾಹಿರಿಗಳನ್ನೂ ಚಿನ್ನವೇ ಮೊದಲಾದ ಅನೇಕ ಲೋಹಗಳಿಂದ ಮಾಡಲ್ಪಟ್ಟ ಬಟ್ಟಿ ಬರೆ ಮೊದಲಾದವುಗಳನ್ನೂ, ನಮ್ಮ ದೇಶದಲ್ಲಿ ಉತ್ಪತ್ತಿಯಾಗತಕ್ಕ ಪರಿಮಳದ್ರವ್ಯಗಳನ್ನೂ ತೆಗದುಕೊಂಡು ಹೋಗಿ ಯೂರೋಪ್ ಖಂಡಕ್ಕೂ ಆಫ್ರಿಕಾಖಂಡದ ಉತ್ತರಭಾಗದಲ್ಲಿರತಕ್ಕ ದೇಶಗಳಿಗೂ ಸರಬರಾಜು ಮಾಡುತ್ತಿದ್ದರು. ಈ ಟಿಗೆ ಗ್ರೀಕ್ ಜನರು ನಾಗರಿಕರಾದರು. ಚರಿತ್ರೆಯನ್ನು ರಚಿಸಿದವರಲ್ಲಿ ಪಿತಾಮಹನಾದ ಹೆರೋಡೋಟಸ್ ಎಂಬಾತನು ನಮ್ಮ ದೇಶದ ಹತ್ತಿಯನ್ನು ನೋಡಿ ಕುರಿಯ ತುಪ್ಪಟಕ್ಕಿಂತಲೂ ಇದು ಬಹಳ ಶ್ರೇಷ್ಠವೆಂದು ಅನೇಕ ಸಾವಿರವರುಷಗಳ ಕೆಳಗೆ ಬರೆದು ಇಟ್ಟಿರುವರು.

ಕ್ರಿಸ್ತಶಕಕ್ಕೆ ಪೂರ್ವ ಇಂಡಿಯಾದೇಶಕ್ಕೂ, ಯೂರೋಪ್ ಖಂಡಕ್ಕೂ ಬಲವಾದ ವ್ಯಾಪಾರವು ನಡೆಯುತ್ತಲಿತ್ತು. ರೋಮ್ ಮತ್ತು ಅಲೆಕ್ಸಾಂಡ್ರಿಯಾ ಪಟ್ಟಣಗಳು ಈ

ವ್ಯಾಪಾರಕ್ಕೆ ಮುಖ್ಯಸ್ಥಾನವಾಗಿದ್ದವು. ರೇಷ್ಮೆ, ಇಂದ್ರನೀಲಮಣಿ, ನೀಲೀ ಬಟ್ಟೆಗಳು ಇವುಗಳೆಲ್ಲಾ ಸಿಂಧೂ ನದೀ ತೀರದಲ್ಲಿರತಕ್ಕ ಪಟ್ಟಣಗಳಿಂದ ಯೂರೋಪ್ ಮತ್ತು ಆಫ್ರಿಕಾ ಖಂಡಗಳಿಗೆ ರಫ್ತಾಗುತ್ತಿದ್ದವು. ಬ್ರೋಚ್ ರೇವುಪಟ್ಟಣದಿಂದ ಇಂಡಿಯಾದೇಶದ ರೇವುಪಟ್ಟಣಗಳಿಗೆ ಚಿನ್ನ, ಬೆಳ್ಳಿ ಮೊದಲಾದ ಲೋಹಗಳು, ಗಾಜಿನ ಸಾಮಾನುಗಳು, ಹವಳಗಳು, ಪರಿಮಳದ್ರವ್ಯಗಳು, ಇವುಗಳು ಸರಬರಾಜಾಗುತ್ತಲಿದ್ದವು. ಇದೇ ರೇವುಪಟ್ಟಣದಿಂದ ಹೊರಗಿನ ದೇಶಗಳಿಗೆ ರತ್ನಪುಡಿಗಳು, ಮಸ್ಲಿನ್ ಬಟ್ಟೆಗಳೂ, ಅರಳೇಬಟ್ಟೆಗಳೂ, ದಂತದ ಸಾಮಾನು, ಕರೀಮರದ ಸಾಮಾನು, ಮೆಣಸು, ರೇಷ್ಮೆ ಮೊದಲಾದವುಗಳೆಲ್ಲಾ ರಫ್ತಾಗುತ್ತಿದ್ದವು. ಕ್ರಿಸ್ತಶಕ ಮೂರನೇಶತಮಾನದಲಿ ಕಾನಸ್ಟ್ಯಾಂಟಿನೋಪಲ್ ಪಟ್ಟಣವು ನಮ್ಮ ದೇಶದ ಸರಕುಗಳ ವ್ಯಾಪಾರಕ್ಕೆ ಮೂಲಸ್ಥಾನವಾಯಿತು. ಸಿಥಿಯರು, ಹೂಣರು ಎಂಬ ದೇಶಾಂತರದ ಜನರು ಲಾಭದಮೇಲೆ ದೃಷ್ಟಿಯನ್ನಿಟ್ಟು ನಮ್ಮ ದೇಶಕ್ಕೆ ಮುತ್ತಿಗೆಯನ್ನು ಹಾಕಿದರು. ಆಗ ವಿಕ್ರಮಾದಿತ್ಯನು ಇವರನ್ನು ಸೋಲಿಸಿ ಓಡಿಸಿದನು. ಚೀನಾದೇಶದಿಂದ ಫಾಹಿಯಾನ್ ಮತ್ತು ಹ್ಯೂಯನ್‌ತ್ಸಾಂಗ್ ಎಂಬ ಯಾತ್ರಿಕರು ಬೌದ್ಧದೇವಾಲಯಗಳೂ ಮತ್ತು ಮಠಗಳನ್ನೂ ನೋಡುವ ಉದ್ದೇಶ್ಯ ನಮ್ಮ ದೇಶಕ್ಕೆ ಬಂದರು. ಜಾವಾ ಮೊದಲಾದ ದ್ವೀಪಗಳಲ್ಲಿ ಹಿಂದುಗಳು ಇದ್ದದ್ದನ್ನು ಆ ಕಾಲದಲಿ ಹಿಂದುಗಳು ಇಟ್ಟುಕೊಂಡಿದ್ದ ನಾವೆಯನ್ನೂ ಅವರು ಉಪಯೋಗಿಸಿಕೊಂಡದ್ದೂ, ಒಂದೂ ಹಿಂದೂ ಹಡಗಿನಲ್ಲಿ ಫಾಹಿಯಾನ್ ಎಂಬುವನು ಇಂಡಿಯಾದೇಶವನ್ನು ಬಿಟ್ಟು ತಾಮ್ರಲಿಪ್ತಿಗೆ ಹೋದದ್ದೂ ಏತರ್ ಪಟ್ಟಣದ ಸರ್ವವಸ್ತು ಪ್ರದರ್ಶನಶಾಲೆಗೂ ಲೀಡ್ಸ್ ಪಟ್ಟಣದ ಸರ್ವವಸ್ತುಪ್ರದರ್ಶನಶಾಲೆಗೆ ಇಂಡಿಯಾ ಜಾವಾ ಮೊದಲಾದವುಗಳಿಂದ ಹಿಂದೂ ವಿಗ್ರಹಗಳು ತೆಗೆದುಕೊಂಡು ಹೋಗಲ್ಪಟ್ಟದ್ದೂ ಇವುಗಳೆಲ್ಲಾ ಫಾಹಿಯಾನರಿಂದ ವಿವರಿಸಲ್ಪಟ್ಟಿವೆ. ಅನಂತರ ವೆನಿಸ್ ಪಟ್ಟಣವು ನಮ್ಮ ದೇಶದೊಡನೆ ವ್ಯಾಪಾರಮಾಡುವದಕ್ಕೆ ಉಪಕ್ರಮಿಸಿ ಅಭೂತಪೂರ್ವವಾದ ಸಂಪತ್ತಿಗೆ ಮುಖ್ಯಸ್ಥಾನವಾಯಿತು. ತರುವಾಯ ಪೋರ್ಚುಗಲ್ ದೇಶವು ಇದೇ ರೀತಿಯಲ್ಲಿ ಸಂಪತ್ತನ್ನು ಹೊಂದಿತು. ಕ್ರಿಸ್ತಶಕ ೧೬ ನೇ ಶತಮಾನದವರೆವಿಗೂ ಪೋರ್ಚುಗಲ್ ದೇಶವು ಈ ವ್ಯಾಪಾರದಿಂದ ಅತ್ಯುನ್ನತಪದವಿಗೆ ಬಂದು ಚೀನಾದೇಶದವರೆಗೂ ಆಸ್ಯಾಖಂಡದ ಸಮುದ್ರ ತೀರದಲ್ಲಿರತಕ್ಕ ಪಟ್ಟಣಗಳಲ್ಲೆಲ್ಲಾ ಸಾಮ್ರಾಜ್ಯಪದವಿಯನ್ನು ಹೊಂದಿತು. ಹದಿನೇಳನೇ ಶತಮಾನದಲ್ಲಿ ಡಚ್ ಜನಗಳು ಈ ಪದವಿಯನ್ನು ಹೊಂದಿದರು. ಅನಂತರ ಹದಿನೆಂಟನೇ ಶತಮಾನದಲ್ಲಿ ಇಂಗ್ಲೀಷ್ ಜನರು ಡಚ್ ಜನಗಳಿಂದ ಈ ಸಾಮ್ರಾಜ್ಯ ಪದವಿಯನ್ನು ಪಡೆದರು. ಹೀಗೆ ನಮ್ಮ ದೇಶದೊಡನೆ ವ್ಯಾಪಾರಮಾಡಿ ಕಾನಸ್ಟ್ಯಾಂಟಿನೋಪಲ್, ವೆನಿಸ್, ಪೋರ್ಚುಗಲ್, ಹಾಲೆಂಡ್, ಇಂಗ್ಲೆಂಡ್ ಮೊದಲಾದ ರಾಜ್ಯಗಳು ಪೂರ್ವಕಾಲದಲ್ಲಿ ತುಂಬಾ ಸಂಪತ್ತನ್ನು ಹೊಂದಿದವು. ಹದಿನೆಂಟನೇ ಶತಮಾನದಲ್ಲಿ ವಿಲಾಯತಿಯವರು ನಮ್ಮ ದೇಶವನ್ನು ಪಡೆದರು. ಐರ್ಲೆಂಡ್ ಮತ್ತು ಅಮೆರಿಕಾದೇಶದ ವಿಷಯದಲ್ಲಿ ಇವರು ವ್ಯಾಪಾರದ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದರೋ ಇಂಡಿಯಾದೇಶದ ವಿಷಯದಲ್ಲಿಯೂ ಹಾಗೆಯೇ

ಹಿಡಿದುಕೊಳ್ಳುತ್ತಲಿದ್ಧಾರೆ. ಇಂಡಿಯಾದೇಶದಿಂದ ರೇಷ್ಮೆ, ಅರಳೆ, ತುಪಟ ಮೊದಲಾದ ಪದಾರ್ಥಗಳನ್ನು ತಮ್ಮ ದೇಶಕ್ಕೆ ರಫ್ತುಮಾಡಿ ವಿಲಾಯತಿಯ ಕೈಗಾರಿಕೆಗಳು ಅಭಿವೃದ್ಧಿಗೆ ಬರುವಂತೆ ಮಾಡುತ್ತಲಿದ್ಧಾರೆ. ತಮ್ಮದೇಶದ ಕೈಗಾರಿಕೆಯ ಕೆಲಸಗಳಿಗೆ ಸ್ಪರ್ಧೆಯಾಗದೇ ಇರಲೆಂದು ದೇಶಾಂತರದಿಂದ ತಮ್ಮ ದೇಶಕ್ಕೆ ಕಳುಹಿಸಲ್ಪಡುವ ಬಟ್ಟೆಬರೆ ಮೊದಲಾದ ಪದಾರ್ಥಗಳಿಗೆ ಸುಂಕವನ್ನು ಹಾಕುತ್ತಲೂ ನಮ್ಮ ದೇಶದಿಂದ ತಮ್ಮದೇಶಕ್ಕೆ ಬರತಕ್ಕ ಸರಕುಗಳಿಗೆ ಸುಂಕವಗೈರೆಗಳಿಲ್ಲದಂತೆ ಮಾಡುತ್ತಲೂ, ತಮ್ಮದೇಶೀಯರ ಅಭಿವೃದ್ಧಿಗೆ ಬೇಕಾದ ಏರ್ಪಾಡುಗಳನ್ನು ಸಮಗ್ರವಾಗಿ ಮಾಡುತ್ತಲಿದ್ಧಾರೆ. ಅಮೇರಿಕಾ, ಐರ್ಲಂಡ್ ಮೊದಲಾದ ದೇಶಗಳಲ್ಲಿ ಇದೇರೀತಿಯಲ್ಲಿ ಮಾಡುತ್ತಿದ್ದರು. ಆದರೆ ಅಮೇರಿಕಾದೇಶದವರು ಸ್ವತಂತ್ರರಾಗಿ ಇವರ ಏರ್ಪಾಡುಗಳಿಗೆ ಅವಕಾಶವಿಲ್ಲದಂತೆ ಮಾಡಿಬಿಟ್ಟರು. ಐರ್ಲೆಂಡ್ ಮತ್ತು ಇಂಡಿಯಾದೇಶೀಯರು ಇವರ ಅಧೀನದಲ್ಲಿಯೇ ಇದ್ದುಕೊಂಡು ದಾಸ್ಯವನ್ನು ಅನುಭವಿಸುತ್ತಲಿದ್ಧಾರೆ. ೧೯ ನೇ ಶತಮಾನದಲ್ಲಿ ಇಂಡಿಯಾ ದೇಶದ ಕೈಗಾರಿಕೆಗಳು ಕ್ಷೀಣಸ್ಥಿತಿಗೆ ಬರುವದಕ್ಕೆ ಉಪಕ್ರಮವಾಯಿತು. ವಿಲಾಯತಿಯ ಕೈಗಾರಿಕೆಗಳು ವಿಶೇಷವಾಗಿ ಅಭಿವೃದ್ಧಿಗೆ ಬಂದವು. ಲಾಭವು ಹೆಚ್ಚಾಗಿ ಬಂದಹಾಗೆಲ್ಲಾ ಸ್ಟೀಮ್ ಮೊದಲಾದ ಶಕ್ತಿಗಳಿಂದ ನಡೆಸಲ್ಪಡತಕ್ಕ ಯಂತ್ರಗಳ ಸಹಾಯದಿಂದ ಬಟ್ಟೆಬರೆ ಮೊದಲಾದವುಗಳು ಮಾಡಲ್ಪಡುವ ಏರ್ಪಾಡುಗಳು ಜಾರಿಗೆ ಬಂದವು. ಅದುಮೊದಲುಗೊಂಡು ವಿಲಾಯತಿಯವರು ವ್ಯಾಪಾರ ಮಾಡುವದರಲ್ಲಿ ಕೊಂಚ ಹೆಚ್ಚಾದ ಧರ್ಮವನ್ನವಲಂಬಿಸಿದರು. ನ್ಯಾವಿಗೇಷನ್ ಕಾನೂನನ್ನೂ ಹೆಚ್ಚಿ ಸುಂಕಗಳನ್ನು ಕ್ರಮಕ್ರಮವಾಗಿ ತೆಗೆದುಹಾಕಿದರು. ಈಗ ನಿರ್ಬಂಧವಿಲ್ಲದೆ ವ್ಯಾಪಾರದಲ್ಲಿ ಬ್ರಿಟಿಷ್ ಜನಗಳು ಅತ್ಯುನ್ನತವಾದ ಪದವಿಯಲ್ಲಿರುತ್ತಾರೆ. (ಇದರಿಂದ ವಿಲಾಯತಿಗೆ ಕೀರ್ತಿಯೂ ಬಂದದ್ದಲ್ಲದೆ ನಷ್ಟಕ್ಕೆ ಅವಕಾಶವೇನೂ ಆಗಲಿಲ್ಲ. ಏಕೆಂದರೆ ಸ್ಟೀಂ ಮೊದಲಾದ ಶಕ್ತಿಗಳಿಂದ ನಡೆಸಲ್ಪಡತಕ್ಕ ಯಂತ್ರಸಹಾಯದಿಂದ ಇವರು ಬಟ್ಟೆಬರೆ ಮೊದಲಾದವುಗಳನ್ನು ಮಾಡುವರು. ಯಂತ್ರಸಹಾಯದಿಂದ ಮಾಡತಕ್ಕ ಕೆಲಸದೊಡನೆ ಕೈಮಗ್ಗದಿಂದ ಕೆಲಸವನ್ನು ಮಾಡುವವರು ಹೆಚ್ಚು ಲಾಭವನ್ನು ಹೊಂದುವದು ಹೇಗೆತಾನೇ ಆದೀತು. ?ಇಂಥಾವರೊಡನೆ ಪೋಟಾಪೋಟಿಯನ್ನು ತಾವು ಮಾಡಿದ್ದರಿಂದ ಇಂಗ್ಲೀಷ್ ಜನರಿಗೆ ಯಾವ ನಷ್ಟತಾನೇ ಬರುವದು?

ಸ್ಟೀಮೂ ಮತ್ತು ವಿದ್ಯುಚ್ಛಕ್ತಿಯೂ ಈ ಪ್ರಪಂಚದ ಸ್ವರೂಪವನ್ನು ಬದಲಾಯಿಸಿದವು. ಕೈಗಾರಿಕೆಯ ಕೆಲಸಗಳು ಇವುಗಳ ಪ್ರಭಾವದಿಂದ ಕೈಕೆಲಸಗಳಿಂದ ಆಗುವುದಕ್ಕಿಂತಲೂ ಲಕ್ಷಾಂತರ ಪಾಲು ಹೆಚ್ಚುವುದಕ್ಕೆ ಅವಕಾಶವಾಯಿತು. ಹೀಗಿದ್ದಾಗ್ಯೂ ಕೂಲೀ ಜನಗಳ ಜೀವನಕ್ಕೆ ಯಾವ ಲೋಪವೂ ಬರಲಿಲ್ಲ. ಈ ಯಂತ್ರಗಳ ಸಹಾಯದಿಂದ ಕೆಲಸ ಮಾಡುವುದಕ್ಕೆ ಉಪಕ್ರಮ ಮಾಡುವುದಕ್ಕೆ ಮುಂಚೆ ಮಗ್ಗಗಳಲ್ಲಿ ಎಷ್ಟು ಜನಗಳಿಗೆ ಜೀವನವು ಸಿಕ್ಕುತ್ತಿತ್ತೋ ಅದಕ್ಕಿಂತಲೂ ಹೆಚ್ಚು ಜನಗಳಿಗೆ ಈಗಿನ ಕಾರಖಾನೆಗಳಲ್ಲಿ ಹೆಚ್ಚು ಕೂಲಿಯು ಸಿಕ್ಕುವುದಕ್ಕೆ ಉಪಕ್ರಮವಾಯಿತು. ಕೈಮಗ್ಗಗಳಿಂದ ಕೆಲಸಮಾಡುತ್ತಿದ್ದ ಜನಗಳ ಸಂಖ್ಯೆಯು ಪೂರ್ವಕ್ಕಿಂತಲೂ ಮೂರುಪಾಲು ಕಡಿಮೆಯಾಯಿತು. ಬೊಂಬಾ

ಹು. ಮಿಲ್ಲುಗಳಲ್ಲಿ ಈಗ ೧ ಲಕ್ಷವೂ ೬೦ ಸಾವಿರ ಜನ ಯಂತ್ರಗಳಿಂದ ನೇಯುಕ್ಕೆ ಕೆಲಸವನ್ನು ಮಾಡುತ್ತಿದ್ದಾರೆ. ಅರಳೇ ರಾಟೆಯ ಯಂತ್ರದಲ್ಲಿ ೩೦ ಸಾವಿರ ಜನರು ಕೆಲಸ ಮಾಡುತ್ತಲಿದ್ದಾರೆ. ಈಗ ೪೦ ವರುಷಗಳಿಗೆ ಮುಂಚೆ ಇಂಡಿಯಾದಲ್ಲೆಲ್ಲಾ ೧೩ ಮಿಲ್ಲುಗಳಿದ್ದವು. ೧೮೭೩ನೇ ಇಸವಿಯಲ್ಲಿ ೬೦ ಮಿಲ್ಲುಗಳಾದವು ೧೮೮೭ರಲ್ಲಿ ೯೫ ಆದವು. ೧೮೯೫ರಲ್ಲಿ ೧೫೫ ಆದವು ೧೯೦೪ರಲ್ಲಿ ೨೦೦ ಆದವು. ೪೦ ವರುಷಗಳ ಕೆಳಗೆ ನಮ್ಮ ದೇಶದಲ್ಲಿ ೩ ಲಕ್ಷ ರಾಟೆಗಳಿದ್ದವು. ೧೯೦೪ರಲ್ಲಿ ೫೦ ಲಕ್ಷ ರಾಟೆಗಳಾದವು. ದಿನೇದಿನೆ ಇವುಗಳು ಹೆಚ್ಚುತ್ತಲಿವೆ. ನೂಲು ವರುಷ ೧ಕ್ಕೆ ೬೦ ಕೋಟಿ ಪೌಂಡುಗಳು ತಯಾರಾಗುತ್ತಲಿದೆ. ಈ ಪೈಕಿ ಮೂರರಲ್ಲಿ ೧ ಭಾಗ ಕೈಮಗ್ಗದವರಿಂದ ಉಪಯೋಗಿಸಲ್ಪಡುತ್ತಲಿದೆ. ಉಳಿದದ್ದೆಲ್ಲಾ ಯಂತ್ರಗಳಿಂದ ಉಪಯೋಗಿಸಲ್ಪಡುತ್ತಲಿವೆ.

ನಮ್ಮ ದೇಶದಲ್ಲಿ ಕೃಷಿಯೇ ಬಹುಜನಗಳಿಗೆ ಮುಖ್ಯವಾದ ಜೀವಿಕೆಯಾಗಿರುವುದು. ಎರಡನೇ ಜೀವಿಕೆಯೇ ಕೈಮಗ್ಗಗಳಿಂದ ಆಗತಕ್ಕದ್ದು. ಈಗ ಸ್ವದೇಶೀ ಪ್ರಯತ್ನಗಳ ಮೇಲೆ ಅಹಮದಾಬಾದಿನಲ್ಲಿಯೂ, ಬೊಂಬಾಯಿನಲ್ಲಿಯೂ, ಹೊಸ ಕೈಗಾರಿಕೆಯ ಯಂತ್ರಗಳು ಪ್ರತಿಷ್ಠಿಸಲ್ಪಟ್ಟವು. ಬರೋಡಾ ಸಂಸ್ಥಾನದಲ್ಲಿಯೂ ಈ ಪ್ರಯತ್ನವು ಮಾಡಲ್ಪಟ್ಟಿರುವುದು. ಜನಗಳಿಗೆ ಮೇಲ್ಪಂಕ್ತಿಯನ್ನು ತೋರುವುದಕ್ಕೋಸ್ಕರ ಈ ಸಂಸ್ಥಾನದಲ್ಲಿ ೨೦ ವರುಷಗಳಿಗೆ ಮುಂಚೆ ಜನಗಳಿಗೆ ಬಟ್ಟೆ ಯಂತ್ರಗಳಿಗೆ ಪ್ರೋತ್ಸಾಹವನ್ನು ಮಾಡುವುದಕ್ಕೂ, ಮಾರ್ಗದರ್ಶನವನ್ನು ಮಾಡುವುದಕ್ಕೂ ಒಂದು ಯಂತ್ರವು ಸ್ಥಾಪಿಸಲ್ಪಟ್ಟಿತು. ಈಚೆಗೆ ಇನ್ನೆರಡು ಮಿಲ್ಲುಗಳು ಇಡಲ್ಪಟ್ಟವು. ಇದಲ್ಲದೆ, ರಾಟೆಗಳು ಅನೇಕವಾಗಿ ಇಡಲ್ಪಟ್ಟವು. ಮಗ್ಗಗಳೂ ಕೂಡ ಬಹಳವಾಗಿ ಹೆಚ್ಚಾದವು. ಈ ಯಂತ್ರಗಳು ಮುಂಚೆ ಎಷ್ಟು ಇದ್ದುವೋ ಅದಕ್ಕಿಂತಲೂ ಬಹಳವಾಗಿ ಹೆಚ್ಚಿದವು ದಪ್ಪ ನೂಲಿನ ಬಟ್ಟೆಗಳು ನಮ್ಮ ಸಂಸ್ಥಾನಕ್ಕೆ ಎಷ್ಟು ಬೇಕೋ ಅಷ್ಟು ಅಲ್ಲಿಯೇ ತಯಾರಾಗುವುವು. ದೇಶಾಂತರದ ಸಾಮಾನ್ಯ ಜನಗಳಿಗೆ ಬೇಕಾದ ಬಟ್ಟೆಗಳು ಬರುವುದೇ ಅಪೂರ್ವವಾಗುತ್ತಾ ಇದೆ. ಅದೇ ಖರೀದಿಗೆ ಇಲ್ಲೇ ದೊರೆಯುವುದರಿಂದ ಜನರು ದೇಶಾಂತರದ ಬಟ್ಟೆಗಳನ್ನು ಕೊಳ್ಳುವುದು ಅಪೂರ್ವ. ನಯವಾದ ನೂಲಿನಿಂದ ತಯಾರಾಗುವ ಬಟ್ಟೆಗಳ ತಯಾರಿಯೂ ಕಡಿಮೆಯಾಗಿದೆ. ನಾವು ತಯಾರು ಮಾಡುವ ನಯವಾದ ಬಟ್ಟೆಗಳಿಗಿಂತಲೂ ಸುಲಭಕ್ರಯಕ್ಕೆ ಹೊರಗಿನ ಬಟ್ಟೆಗಳು ಸಿಕ್ಕುತ್ತವೆ. ಹೊರಗಿನ ಬಣ್ಣಗಳು ಚನ್ನಾಗಿವೆ. ಛೀಟಿಗಳು ದೇಶಾಂತರದಿಂದ ಬರತಕ್ಕವುಗಳೇ ಚನ್ನಾಗಿವೆ. ವಿಲಾಯಿತಿ, ಜರ್ಮನಿ, ಫ್ರಾನ್ಸ್ ದೇಶಗಳಿಂದ ಬರತಕ್ಕ ದಿನಸುಗಳು ಬಹಳ ಉತ್ಕೃಷ್ಟವಾದವುಗಳು. ಹಾಗೆ ನಯವಾಗಿಯೂ, ಒಳ್ಳೇ ರಂಗುಳ್ಳವುಗಳಾಗಿಯೂ ಇರುವ ಬಟ್ಟೆಗಳನ್ನು ಮಾಡುವುದನ್ನು ನಮ್ಮ ಜನಗಳು ಕಲಿಯಬೇಕು.

ಇಷ್ಟು ಮಟ್ಟಿಗೆ ನಮ್ಮ ದೇಶೀಯರು ಕೆಲಸಮಾಡುತ್ತಾರೆಂದು ತೃಪ್ತರಾಗಕೂಡದು. ಇನ್ನೂ ತುಂಬಾ ಕೆಲಸಮಾಡುವುದಕ್ಕೆ ಅವಕಾಶವಿರುವುದು. ಕಳೆದ ವರುಷ ನಮ್ಮ ಸಂ

ಸ್ಥಾನದಲ್ಲಿ ೬೦ ಕೋಟಿ ಗಜ ಬಟ್ಟೆಯು ನೇಯಲ್ಪಟ್ಟಿತು. ಆದರೆ ದೇಶಾಂತರದಿಂದ ಇಪ್ಪತ್ತಾರು ಕೋಟಿ ಗಜ ಬಟ್ಟೆಯು ಬರುತ್ತಲಿವೆ. ನಮ್ಮ ದೇಶದಿಂದ ೨೧ವರೆ ಕೋಟಿ ಪೌನ್ ಅರಳೆಯು ದೇಶಾಂತರಕ್ಕೆ ಹೋಗುತ್ತಲಿದೆ. ದೇಶಾಂತರದಿಂದ ೩೯ ಕೋಟಿ ಪೌನಿನ ಬಟ್ಟೆಬರೆಗಳು ಬರುತ್ತಲಿವೆ. ನಮ್ಮ ದೇಶಕ್ಕೆ ಎಷ್ಟು ಬಟ್ಟೆಗಳು ಬೇಕೋ ಅಷ್ಟು ಉತ್ಪತ್ತಿಯನ್ನಾದರೂ ನಮ್ಮ ಜನಗಳೇ ಮಾಡುವಂತೆ ಏರ್ಪಾಡು ಮಾಡಬೇಕು. ಬಟ್ಟೆಬರೆಗಳು ಮಾತ್ರವೇ ಯಂತ್ರಸಹಾಯದಿಂದ ಆಗುವುದೆಂದು ತಿಳಿಯಕೂಡದು. ಅನೇಕ ಪದಾರ್ಥಗಳು ಯಂತ್ರ ಸಹಾಯದಿಂದ ತಯಾರಾಗುತ್ತಲಿವೆ. ಬಂಗಾಳದಲ್ಲಿ ಜೂಟ್ ಎಂಬ ನಾರಿನ ಕೆಲಸವು ವಿಶೇಷವಾಗಿ ನಡೆಯುತ್ತದೆ. ೧೮೭೪ರಲ್ಲಿ ಇಂಥಾ ಯಂತ್ರಗಳು ೨೮ ಇದ್ದವು. ೧೮೯೬ರಲ್ಲಿ ೯೮ ಮಿಲ್ಲುಗಳಾದವು. ದಕ್ಷಿಣ ಇಂಡಿಯಾ ಮತ್ತು ಪಂಜಾಬಿನಲ್ಲಿ ತುಪ್ಪಟದ ಬಟ್ಟೆಗಳನ್ನು ಮಾಡತಕ್ಕ ಕಾರ್ಖಾನೆಗಳು ೬ ಇರುವುವು. ಅವುಗಳ ಉತ್ಪತ್ತಿಯು ೧೮೯೩ರಲ್ಲಿ ೨೫ ಲಕ್ಷ ಪೌನು ತೂಕವುಳ್ಳದ್ದಾಗಿತ್ತು. ೧೯೦೪ರಲ್ಲಿ ೩೫ ಲಕ್ಷ ಪೌನುಗಳ ತೂಕವುಳ್ಳದ್ದಾಗಿತ್ತು. ದಿನೇದಿನೇ ಕ್ರಮಕ್ರಮವಾಗಿ ಈ ಕೈಗಾರಿಕೆಗಳು ವೃದ್ಧಿಗೆ ಬರುತ್ತಲಿವೆ. ಇದು ಸಂತೋಷಕಾರಿಯಾದದ್ದು. ರೇಷ್ಮೆ ಕೆಲಸವು ಇಂಡಿಯಾದೇಶದಲ್ಲಿ ಬಹು ಕಾಲದಿಂದ ನಡೆಯುತ್ತಿತ್ತು. ೧೮ನೇ ಶತಮಾನ ಮತ್ತು ೧೯ನೇ ಶತಮಾನದಲ್ಲಿ ಮೊದಲುಭಾಗ, ಇವುಗಳಲ್ಲಿ ಈ ಕೆಲಸಕ್ಕೆ ಬಹಳ ನಿರ್ಬಂಧಗಳುಂಟಾದದ್ದರಿಂದ ಅದು ಕ್ಷೀಣದೆಸೆಗೆ ಬಂತು. ಈ ಕಸಬಿನಲ್ಲಿಯೂ ಈಚೆಗೆ ಅಲ್ಪಸ್ವಲ್ಪ ಅಭಿವೃದ್ಧಿಯು ನಡೆಯುತ್ತಲಿರುವುದು. ಇಂಡಿಯಾದೇಶದ ಅನೇಕ ಭಾಗಗಳಲ್ಲಿ ಈಗಲೂ ರೇಷ್ಮೆಯ ಕೆಲಸವು ನಡೆಯುತ್ತಲಿರುವುದು. ಈ ರೇಷ್ಮೆ ಬಟ್ಟೆಗಳು ಯೂರೋಪ್‌ಖಂಡಕ್ಕೆ ರಫ್ತಾಗುತ್ತಲಿವೆ. ಅಸ್ಸಾಂ ದೇಶದಲ್ಲಿ ಹೆಂಗಸರು ರೇಷ್ಮೆ ಉಡಿಗೆಗಳನ್ನು ಹಾಕಿಕೊಳ್ಳುತ್ತಲಿದ್ದಾರೆ. ಪ್ರತಿಯೊಂದು ಕುಟುಂಬದವರೂ ತಮ್ಮ ಸೀರೆಗಳನ್ನು ರೇಷ್ಮೆಯಿಂದ ತಾವೇ ನೇಯುತ್ತಲಿದ್ದಾರೆ. ಬಂಗಾಳದಲ್ಲಿ ಬೀಜವನ್ನು ಶೋಧಿಸುವುದರಿಂದ ಕೆಲವು ಅಭಿವೃದ್ಧಿಗಳು ಮಾಡಲ್ಪಡುತ್ತಲಿವೆ. ಪಂಜಾಬ್ ದೇಶದಲ್ಲಿ ರೇಷ್ಮೆ ಹುಳಗಳನ್ನು ತಯಾರುಮಾಡತಕ್ಕ ಏರ್ಪಾಡು ವಿಶೇಷ ಫಲಕಾರಿಯಾಗಿ ಇಲ್ಲ. ಕಾಶ್ಮೀರದಲ್ಲಿ ರೇಷ್ಮೆ ಕೆಲಸವು ಬಹುಕಾಲದಿಂದ ನಡೆಯುತ್ತಲಿದೆ. ವೃದ್ಧಿಗೆ ತರುವುದಕ್ಕೆ ಸರಕಾರದವರು ಪ್ರಯತ್ನಿಸುತ್ತಲಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಈ ಕೆಲಸಕ್ಕೆ ವಿಶೇಷ ಗಮನವು ಕೊಡಲ್ಪಡುತ್ತಲಿದೆ. ಬರೋಡಾದಲ್ಲಿ ಇದನ್ನು ವೃದ್ಧಿಮಾಡುವ ಪ್ರಯತ್ನವು ಮಾಡಲ್ಪಡುತ್ತಲಿದೆ. ರೇಷ್ಮೆಯ ಹುಳುಗಳಿಂದ ನೂಲನ್ನು ನೂಲತಕ್ಕ ಕಾರ್ಖಾನೆಗಳು ೧೯೦೪ರಲ್ಲಿ ೩೫ ಇದ್ದವು. ಈಗ ರೇಷ್ಮೆ ಯಂತ್ರಗಳು ೧೧ ಉಂಟಾಗಿವೆ. ಗ್ರಾಮಾಂತರಗಳಲ್ಲಿಯೂ ಅನೇಕ ರೈತರು ತಮ್ಮ ತಮ್ಮ ಗುಡಿಸಲುಗಳಲ್ಲಿ ರೇಷ್ಮೆಯನ್ನು ತೆಗೆಯುವ ಏರ್ಪಾಡಿರುವುದು

ಹಿತ್ತಾಳೇ ತಾಂಬ್ರ ಮೊದಲಾದವುಗಳಿಂದ ಪಾತ್ರೆಗಳನ್ನು ಮಾಡತಕ್ಕ ಕೈಗಾರಿಕೆಯೂ ಈ ದೇಶದಲ್ಲಿ ಬಹುಕಾಲದಿಂದ ಇರುವುದು. ಯೂರೋಪ್‌ಖಂಡದಿಂದ ಈಚೆಗೆ ಕಳ್ಪಿಸಿದ

ಪಾತ್ರೆಗಳಿಗೆ ಗಾಜಿನ ಮುಲಾಮನ್ನು ಮಾಡಿ ಬೆಳೆಗಾಗಿ ಕಳುಹಿಸುವ ಏರ್ಪಾಟು ಆಚರಣೆಗೆ ಬಂತು. ಅಲ್ಯೂಮಿನಿಯಂ ಪಾತ್ರೆಗಳನ್ನು ತಯಾರ್ಮಾಡುವ ಒಂದು ಹೊಸ ಕೆಲಸವು ಈಚೆಗೆ ಆಚರಣೆಗೆ ಬಂದಿರುವುದು. ಇದನ್ನು ವೃದ್ಧಿಗೆ ತರುವುದಕ್ಕೆ ಮದರಾಸು ಪಟ್ಟಣದ ಮಿ॥ ಛಾಟರ್ಟರವರು ಬಹಳ ಸಹಾಯವಾಗಿರುವರು.

ಇಂಡಿಯಾ ದೇಶದ ಮಧ್ಯರಾಜ್ಯದಲ್ಲಿ ಕಬ್ಬಿಣವು ವಿಶೇಷವಾಗಿ ಸಿಕ್ಕುವದೆಂಬ ಅಂಶವನ್ನು ಭೂಗರ್ಭಶಾಸ್ತ್ರದ ಸರ್ವೆ ಇಲಾಖೆಯವರು ಗೊತ್ತು ಮಾಡಿರುವರು. ಈ ಕೆಲಸವು ವಿಶೇಷವೃದ್ಧಿಗೆ ಬರುವ ಸಂಭವವು ಇರುತ್ತದೆ. ಈಗ ಸಿಕ್ಕಿರತಕ್ಕ ಗಣಿಗಳಂತೆ ಕಬ್ಬಿಣದ ಗಣಿಗಳು ಇನ್ನೂ ವಿಶೇಷವಾಗಿರುತ್ತವೆ. ಟಾಟಾರವರ ಕಂಪೆನಿಯೊಂದಿಗೆ ಸ್ಪರ್ಧೆಯಿಂದ ಕೆಲಸಮಾಡತಕ್ಕ ಕಂಪೆನಿಗಳು ಇನ್ನೂ ಕೆಲವು ಉಂಟಾದರೆ ಈ ಕೆಲಸವು ಜಾಗ್ರತೆಯಲ್ಲಿಯೇ ವಿಶೇಷ ವೃದ್ಧಿಗೆ ಬರಬಹುದು. ಈ ದೇಶದಲ್ಲಿ ಅಲ್ಲಲ್ಲಿಯೇ ಕಲ್ಲಿದ್ದಲಿನ ಗಣಿಗಳು ಇರುವವು. ಈ ಗಣಿಗಳಿಂದ ಕಬ್ಬಿಣದ ಕೆಲಸ ನಡೆಯತಕ್ಕ ಕಾರ್ಖಾನೆಗಳಿಗೆ ಇದನ್ನು ಸಾಗಿಸುವದಕ್ಕೆ ರೈಲುರಸ್ತೆ ಮೊದಲಾದವುಗಳನ್ನು ಹಾಕಿ ಅನುಕೂಲಪಡಿಸಿದರೆ ಈ ಕೆಲಸವು ಇನ್ನೂ ವಿಶೇಷವಾಗಿ ನಡೆಯುವದಕ್ಕೆ ಅವಕಾಶವಾಗುವದು. ಮಿ॥ ಪಿ ಎನ್ ಬೋಸ್ ರವರು ಟಾಟಾ ಕಂಪೆನಿಯವರು ರೂಢಿಸುತ್ತಲಿರುವ ಕಬ್ಬಿಣದ ಗಣಿಯನ್ನು ಕಂಡುಹಿಡಿದರು. ಈ ಗಣಿಯನ್ನು ರೂಢಿಸುವದಕ್ಕೋಸ್ಕರ ಮಿ॥ ಟಾಟಾರವರ ಮಕ್ಕಳು ೧೯೦೮ರಲ್ಲಿ ೪೯ ಕುಲುಮೆಗಳನ್ನು ಇಟ್ಟರು. ಈ ಕುಲುಮೆಗಳನ್ನು ಇನ್ನೂ ಜಾಸ್ತಿ ಮಾಡುವದರಲ್ಲಿದ್ದಾರೆ.

ಬಂಗಾಳದಲ್ಲಿ ಕಲ್ಲಿದ್ದಲಿನ ಗಣಿಗಳು ಅನೇಕವಾಗಿರುತ್ತವೆ. ೧೯೦೬ರಲ್ಲಿ ಇಂಡಿಯಾದ ಕಲ್ಲಿದ್ದಲಿನ ಗಣಿಗಳಿಂದ ಎರಡುಕೋಟಿರೂಪಾಯಿ ಕಲ್ಲಿದ್ದಲು ತೆಗೆಯಲ್ಪಟ್ಟಿತು. ಎಂಭತ್ತು ಲಕ್ಷ ಟನ್ ಕಲ್ಲಿದ್ದಲು ತೆಗೆಯಲ್ಪಟ್ಟಿತು. ಆದರೆ ವಿಲಾಯಿತಿಯಲ್ಲಿ ಪ್ರತಿವರುಷವೂ ೩೦ ಕೋಟಿ ಟನ್ ಕಲ್ಲಿದ್ದಲನ್ನು ತೆಗೆದು ಕೆಲಸಮಾಡುತ್ತಾರೆ. ಎಂಭತ್ತು ಲಕ್ಷ ಟನ್‌ಗಳಲ್ಲಿ ಆಗತಕ್ಕ ಕೆಲಸಕ್ಕೂ ಇಪ್ಪತ್ತುಕೋಟಿ ಟನ್‌ಗಳಲ್ಲಿ ಆಗತಕ್ಕ ಕೆಲಸಕ್ಕೂ ಎಷ್ಟೋ ವ್ಯತ್ಯಾಸವು ಇರುವದು. ಈ ದೇಶದಲ್ಲಿ ಬಂಡವಾಳದ ಅಭಾವದ ಜೊತೆಗೆ ಇಂಥಾ ಕೆಲಸಗಳನ್ನು ಮಾಡುವದಕ್ಕೆ ಬೇಕಾದ ಶಾಸ್ತ್ರಜ್ಞಾನದ ಅಭಾವವೂ ಸೇರಿರುವುದು. ಇಂಡಿಯಾ ಗವರ್ನ್‌ಮೆಂಟಿನವರು ಗಣೀಕೆಲಸಗಳನ್ನು ಕಲಿತುಕೊಳ್ಳುವದಕ್ಕಾಗಿ ಕೆಲವುಜನ ವಿದ್ಯಾರ್ಥಿಗಳಿಗೆ ವೇತನಗಳನ್ನು ಕೊಟ್ಟು ಕಳುಹಿಸಿರುವರು. ಕಬ್ಬಿಣದ ಕೆಲಸವು ಸಮರ್ಪಕವಾಗಿ ನಡೆಯಬೇಕಾದರೆ ಕಬ್ಬಿಣದ ಗಣಿಗಳು ಸಿಕ್ಕಿದ ಮಾತ್ರದಿಂದಲೇ ಆಗುವದಿಲ್ಲ. ಇದರ ಜೊತೆಗೆ ಕಲ್ಲಿದ್ದಲಿನ ಗಣಿಗಳು ವಿಶೇಷವಾಗಿ ಸಿಕ್ಕಬೇಕು. ಅವುಗಳನ್ನು ರೂಢಿಸಲು ಬೇಕಾದ ಬಂಡವಾಳವೂ ಶಾಸ್ತ್ರಜ್ಞಾನವೂ ಇವೆರಡೂ ಬೇಕು.

ಸ್ಟೀಂಯಂತ್ರಗಳಿಂದ ನಡೆಯತಕ್ಕ ಕೆಲಸಗಳು ಅನೇಕವಾಗಿರುವವು. ಇವುಗಳಲ್ಲಿ ಅರಳೇಬಟ್ಟೆಯನ್ನು ಮಾಡತಕ್ಕ ಯಂತ್ರಗಳೂ, ಜೂಟೆಂಬ ನಾರಿನ ಬಟ್ಟೆಯನ್ನು ಮಾಡತಕ್ಕ ಯಂತ್ರಗಳೂ, ತುಬಟದ ಬಟ್ಟೆಯನ್ನು ಮಾಡತಕ್ಕ ಯಂತ್ರಗಳೂ. ಅರಳೇ ನೂಲ

ತಕ್ಕ ಯಂತ್ರಗಳೂ, ಅರಳೆಯನ್ನು ಶುದ್ಧಿಮಾಡತಕ್ಕ ಯಂತ್ರಗಳೂ, ಹಿಟ್ಟನ್ನು ಮಾಡತಕ್ಕ ಯಂತ್ರಗಳೂ, ಭತ್ತವನ್ನು ಕುಟ್ಟತಕ್ಕ ಯಂತ್ರಗಳೂ, ಸಕ್ಕರೇ ಮಾಡತಕ್ಕ ಯಂತ್ರಗಳೂ, ರೇಷ್ಮೇ ತೆಗೆಯತಕ್ಕ ಯಂತ್ರಗಳೂ ರೇಷ್ಮೇಮಿಲ್‌ಗಳೂ, ಚಮಡಾದ ಯಂತ್ರಗಳೂ, ವೀಣೇ ಯಂತ್ರಗಳೂ, ಅರಗಿನ ಯಂತ್ರಗಳೂ, ಕಬ್ಬಿಣದ ಮತ್ತು ಹಿತ್ತಾಳೆ ಯಂತ್ರಗಳೂ, ಹೀಲೀ ಯಂತ್ರಗಳೂ, ಇವುಗಳೆಲ್ಲಾ ಈಗ ಕೆಲವು ನಡೆಯುತ್ತಲಿವೆ. ೧೮೯೫ ರಲ್ಲಿ ಈ ಯಂತ್ರಗಳು ೧೧,೮೫೭ ಇದ್ದವು ೧೯೦೪ ರಲ್ಲಿ ೬೦೩೧ ಯಂತ್ರಗಳು ಜಾಸ್ತಿಯಾದವು ಇವುಗಳೆಲ್ಲಾ ಸ್ಟೀಂ ಶಕ್ತಿಯಿಂದ ನಡಿಸಲ್ಪಡುತ್ತಲಿವೆ. ಆದಾಗ್ಯೂ ಈ ಯಂತ್ರಶಕ್ತಿಯಿಂದ ಎಷ್ಟು ಉತ್ಪತ್ತಿಯಾಗಬೇಕೋ ಅದರಲ್ಲಿ ನಾಲ್ಕರಲ್ಲಿ ಒಂದುಪಾಲು ಮಾತ್ರ ನಾವು ಈಗ ಉತ್ಪತ್ತಿಮಾಡುತ್ತಲಿದ್ದೇವೆ ಕಾಟನ ಮತ್ತು ಜೂಟ್ ಬಟ್ಟೆಗಳನ್ನು ನೇಯತಕ್ಕ ಯಂತ್ರಗಳೆಲ್ಲಾ ಯೂರೋಪ್‌ಖಂಡದ ಬಂಡವಾಳಿಗರಿಂದ ನಡೆಸಲ್ಪಡುತ್ತಲಿವೆ.

ನಾವು ಈ ಕೈಗಾರಿಕೆಯನ್ನು ಉಪಕ್ರಮಿಸಿದ ಕಳೆದ ೧೦ ವರ್ಷಗಳಿಂದ ಸಕ್ಕರೇ ಮತ್ತು ಚಮಡಾ ಕಾರ್ಖಾನೆಗಳ ಕೆಲಸದಲ್ಲಿಯೂ ಕೂಡ ನಮ್ಮ ಜನರು ಸಮರ್ಪಕವಾದ ಕೆಲಸವನ್ನು ಮಾಡುತ್ತಲಿಲ್ಲ ಕಬ್ಬಿಣ ಕೆಲಸಮಾಡುವವರಲ್ಲಿ ಇಂಡಿಯಾಕ್ಕೆ ಎಷ್ಟು ಸಾಮಾನುಬೇಕೋ ಅಷ್ಟನ್ನು ನಾವು ಮಾಡುತ್ತಲಿಲ್ಲ. ಈ ಸಾಮಾನುಗಳು ಪ್ರಾಯಶವಾಗಿ ದೇಶಾಂತರದಿಂದ ಬರುತ್ತಲಿವೆ ಈ ಬಾಬುಗಳೆಲ್ಲಾ ನಾವು ಶ್ರದ್ಧೆಯಿಂದ ಕೆಲಸ ಮಾಡಿದರೆ ನಮ್ಮ ದೇಶದ ದಾರಿದ್ರ್ಯವು ಹತವಾಗುವದು. ಕಬ್ಬಿಣದ ಕೆಲಸವನ್ನು ಮಾಡುವವರಲ್ಲಿ ಇಂಡಿಯಾದೇಶಕ್ಕೆ ಎಷ್ಟುಸಾಮಾನುಬೇಕೋ ಅಷ್ಟನ್ನು ನಾವುಮಾಡುತ್ತಲಿಲ್ಲ. ಈ ಸಾಮಾನುಗಳು ಪ್ರಾಯಶವಾಗಿ ಇಲ್ಲಿಗೆ ದೇಶಾಂತರದಿಂದ ಬರುತ್ತಲಿವೆ ಈ ಬಾಬುಗಳೆಲ್ಲಾ ನಾವು ಶ್ರದ್ಧೆಯಿಂದ ಕೆಲಸಮಾಡಿದರೆ ನಮ್ಮದೇಶದ ದಾರಿದ್ರ್ಯವು ಹತವಾಗುವದು,

ನಮ್ಮ ದೇಶದಲ್ಲಿ ಯಂತ್ರಸಹಾಯದಿಂದ ಕೆಲವು ಕೈಗಾರಿಕೆಗಳು ನಡೆಯುವವು ಇದಲ್ಲದೆ ತೇಯಲೆ, ನೀಲಿ, ಕಾಫಿ ಇವುಗಳನ್ನು ಬೆಳೆಯತಕ್ಕ ಕೃಷಿಯು ನಡೆಯುವದು. ಯಂತ್ರದ ಕಾರ್ಖಾನೆಗಳು ಅನೇಕವಾಗಿರುವವು. ಇಲ್ಲಿ ಕೆಲಸ ಮಾಡತಕ್ಕವರೂ ಬಹುಜನಗಳಿರುವರು ಈ ಕೆಲಸಗಳೆಲ್ಲಾ ಪಟ್ಟಣವಾಸಗಳಲ್ಲಿ ನಡೆಯುವವು, ಗ್ರಾಮಾಂತರಗಳಲ್ಲಿ ಜನಗಳು ತಮ್ಮ ತಮ್ಮ ಮನೆಗಳಲ್ಲಿ ನಡಿಸತಕ್ಕ ಕೆಲಸಗಳು ಅನೇಕವಾಗಿರುತ್ತವೆ ಇಂಥಾ ಕೆಲಸಗಳು ವೃದ್ಧಿಯಾದ ಹೊರತೂ ಜನಗಳ ಕಷ್ಟವು ಹತವಾಗುವದಿಲ್ಲ ಪಟ್ಟಣಗಳಲ್ಲಿ ಲಕ್ಷಾಂತರ ಜನಗಳು ಕೆಲಸಮಾಡುವದುಂಟು ಗ್ರಾಮಾಂತರಗಳಲ್ಲಿ ಸ್ತ್ರೀ ಪುರುಷರೆಲ್ಲರೂ ಅವರವರ ಮನೆಗಳಲ್ಲಿ ಮಾಡಿಕೊಳ್ಳಬಹುದಾದ ಕೆಲಸಗಳನ್ನು ಮಾಡುತ್ತಾ ಬಂದರೆ ಕೋಟ್ಯಂತರ ಜನಗಳಿಗೆ ಜೀವನವು ದೊರೆಯುವದು. ಇಂಡಿಯಾದೇಶದಲ್ಲಿ ಉದ್ಯೋಗದಿಂದ ಜೀವಿಸುವದುಕಷ್ಟವಲ್ಲ. ಜನಗಳಿಗೆಲ್ಲಾ ಜೀವನವು ಸಿಕ್ಕಬೇಕಾದರೆ ಇದೇ ಮುಖ್ಯವಾದ ಉಪಾಯ ಜನಗಳು ಗ್ರಾಮಾಂತರಗಳನ್ನು ಬಿಟ್ಟು ಪಟ್ಟಣಗಳಿಗೆ ಹೋಗಬೇಕಾದರೆ ಬಹಳ ಕಷ್ಟವು ಜೀವನಕ್ಕೆ ಬಾಧಕ ಬರಕೂಡದೆಂಬುವದೇ ಇವರ ಗವರ್ನ್ಮೆಂಟಿನವರ ಉದ್ದೇಶವಾಗಿತ್ತು.

ನಮ್ಮ ದೇಶದಲ್ಲಿ ಎಷ್ಟು ಸುಂಕವು ಬೀಳುತ್ತಿತ್ತೋ ಅಷ್ಟು ಮೊಬಲಗನ್ನು ಅವರಿಗೆ ಅವರ ಸರಕಾರದವರು ಉಚಿತವಾಗಿ ಕೊಡುತ್ತ ಬಂದರು. ಆದರಿಂದ ಆ ದೇಶೀಯರಲ್ಲಿ ಸಕ್ಕರೆಯನ್ನು ಮಾಡುತ್ತಿದ್ದವರಿಗೆ ನಮ್ಮ ದೇಶದಲ್ಲಿ ಸುಂಕ ಹಾಕಿದ್ದರಿಂದ ಯಾವ ಬಾಧಕವು ಆಗಲಿಲ್ಲ. ಸುಂಕ ಹಾಕದಿದ್ದರೆ ಹೇಗೋ ಹಾಗೆಯೇ ಅದರ ಕೆಲಸಗಳನ್ನು ಮಾಡುತ್ತ ಬಂದರು. ಆದರಿಂದ ಅವರಿಗೆ ಜೀವನವು ಸುಲಭವಾಗಿ ನಡೆಯುತ್ತ ಬಂತು. ಪ್ರಜೆಗಳಿಗೆ ಜೀವನಕ್ಕೆ ಇಲ್ಲದೇ ಹೋದರೆ ಅವರು ಸನ್ಮಾರ್ಗವನ್ನು ಬಿಟ್ಟು ದುರ್ಮಾರ್ಗಕ್ಕೆ ಬೀಳುವರೆಂಬುದಾಗಿಯೂ ಹಾಗೆ ಆಗದಂತೆ ಮಾಡುವದಕ್ಕೆ ಎಷ್ಟು ಖರ್ಚು ತಗಲಿದಾಗ್ಯೂ ಅದಕ್ಕೆ ಹಿಂತೆಗೆಯದೆ ಅವರ ಕೆಲಸಕ್ಕೆ ಸಹಾಯಮಾಡಬೇಕೆಂಬದಾಗಿಯೂ ತಿಳಿದುಕೊಂಡು ಕೆಲಸವನ್ನು ಮಾಡುವದರಿಂದ ಪಾಶ್ಚಾತ್ಯರು ಉತ್ತಮಸ್ಥಿತಿಯಲ್ಲಿ ಇರುತ್ತಾರೆ. ನಾವು ಈ ವಿಷಯದಲ್ಲಿ ಉಪೇಕ್ಷೆಯುಳ್ಳವರಾಗಿ ನಮ್ಮ ಕರ್ತವ್ಯವನ್ನು ಸರಿಯಾಗಿ ಮಾಡದೇ ಜನಗಳಿಗೆ ಅವರು ಹೇಗೆ ಜೀವಿಕೆಯನ್ನು ಸಂಪಾದಿಸಿಕೊಳ್ಳಬೇಕೋ ಅದಕ್ಕೆ ಸಹಾಯವನ್ನು ಮಾಡದೇ ಹೊಂದುತ್ತಲಿರುವದರಿಂದ ನಮ್ಮ ದೇಶಕ್ಕೆ ಇಂಥಾ ಹೀನಸ್ಥಿತಿಯು ಬರುತ್ತಲಿರುವದು.

ಸ್ವದೇಶೀ ವಿಚಾರವು ಪ್ರಯೋಜನಕಾರಿಯಾಗಬೇಕಾದರೆ ಜನರು ತಮ್ಮ ಕಾಲವನ್ನೂ ಮೆಹನತ್ತನ್ನೂ, ಬಂಡವಾಳವನ್ನೂ ಚೆನ್ನಾಗಿ ಉಪಯೋಗಿಸಿ ಅದರಿಂದ ಜೀವನಕ್ಕೆ ಉಪಯೋಗವಾದ ಪ್ರಯೋಜನಗಳನ್ನು ಹೊಂದಬೇಕು. ಈ ವಿಚಾರವು ಚೆನ್ನಾಗಿ ಮಾಡಲ್ಪಟ್ಟರೆ ಅದರಿಂದ ತುಂಬಾ ಫಲವು ಆಗುವದು. ಹಾಗಿಲ್ಲದೇ ಹೋದರೆ ನಷ್ಟಕ್ಕೆ ಅವಕಾಶವಾಗುವದು. ನಮ್ಮ ದೇಶದಲ್ಲಿ ಅನೇಕ ಕೈಗಾರಿಕೆಗಳು ಇರುವವು. ಅವುಗಳನ್ನು ಯಾವ ಯಂತ್ರಸಹಾಯದಿಂದ ಪಾಶ್ಚಾತ್ಯರು ಮಾಡುವರೋ ಅದನ್ನು ತಿಳಿದುಕೊಳ್ಳಬೇಕು. ಮದರಾಸಿನಲ್ಲಿ ಚಮಡಾವನ್ನು ಹದಮಾಡತಕ್ಕ ಕೆಲಸ ಒಂದು ಇರುವದು. ಇದೇ ಕೆಲಸವನ್ನು ಅಮೇರಿಕಾಖಂಡದಲ್ಲಿ ಬಹಳ ಸುಲಭವಾಗಿ ಮಾಡುವರು. ಈ ಕೆಲಸಕ್ಕೆ ಇಂಡಿಯಾದೇಶದಲ್ಲಿ ತಗಲತಕ್ಕ ಖರ್ಚಿಗಿಂತ ಅಮೇರಿಕಾ ದೇಶದಲಿ ಬಹಳ ಕಡಮೆಯಾಗಿ ಖರ್ಚಾಗುವದು. ಇದಲ್ಲದೆ ನೀಲಿಯನ್ನು ತಯಾರುಮಾಡತಕ್ಕ ಕಾರ್ಖಾನೆಯೊಂದಿರುವದು. ನಮ್ಮ ದೇಶದಲ್ಲಿ ನೀಲಿಯನ್ನು ಬೆಳೆಯುತ್ತಾರೆ. ಅಮೇರಿಕಾಖಂಡದಲ್ಲಿ ಯಾವಯಾವ ದ್ರವ್ಯಗಳು ಸೇರಿ ನೀಲಿಯಾಗುತ್ತದೋ ಅದನ್ನು ಪರೀಕ್ಷಿಸಿ ಅವುಗಳನ್ನು ಸೇರಿಸಿ ನೀಲಿಯನ್ನು ಮಾಡುತ್ತಾರೆ. ಈ ರೀತಿಯಲ್ಲಿ ಮಾಡಲ್ಪಟ್ಟ ನೀಲಿಯ ನಿರ್ಮಾಣವು ಕಲ್ಲಿದ್ದಲಿಯಿಂದ ಮಾಡಲ್ಪಟ್ಟ ಹೀರಿನ ನಿರ್ಮಾಣದಂತೆ ವಸ್ತುಶಾಸ್ತ್ರದಲ್ಲಿ ಬಹಳ ಆಶ್ಚರ್ಯವನ್ನು ಉಂಟುಮಾಡಿ ಇದೆ. ದೇಶಾಂತರದ ಶಿಲ್ಪಿಗಳಿಂದ ಕೈಗಾರಿಕೇ ಕೆಲಸದವರ ಮೆಹನತ್ತಿನಿಂದ ನಮ್ಮಗೆ ಭೋಜನವೂ ಬಟ್ಟೇಬರೆಗಳೂ, ಬೆಳಕೂ ಶಾಖವನ್ನುಂಟುಮಾಡುವ ಪದಾರ್ಥಗಳೂ, ಸೌಖ್ಯವನ್ನುಂಟುಮಾಡುವ ಪದಾರ್ಥಗಳೂ, ಗಾಡಿಗಳೇ ಮೊದಲಾದ ಯಾನಗಳೂ ಮನೆಗಳೂ ಇವೆಲ್ಲಾ ಸರಬರಾಜು ಮಾಡಲ್ಪಡುತ್ತವೆ.

ನಮ್ಮ ಕೈಗಾರಿಕೆಗಳೆಲ್ಲಾ ಹೀನಸ್ಥಿತಿಗೆ ಬಂದವು ನಿರ್ಮೂಲವಾಗುವದರಲ್ಲಿವೆ. ಕೈಗಾರಿಕೆಗಳ ವಿಷಯದಲ್ಲಿ ನಾವು ಪಾಶ್ಚಾತ್ಯರಿಗೆ ದಾಸರಾಗಿ ಇದ್ದೇವೆ ಎಲ್ಲಾ ರೋಗಗಳಿಗಿಂತಲೂ ಕೈಗಾರಿಕೆಗಳಿಗುಂಟಾಗಿರತಕ್ಕ ರೋಗವು ಬಹಳ ಅನರ್ಥಕಾರಿಯಾದದ್ದು. ಇದಕ್ಕೆ ಸರಿಯಾದ ಚಿಕಿತ್ಸೆಯನ್ನು ಮಾಡದೇ ಇದ್ದರೆ ನಮ್ಮ ದೇಶವು ಬಹಳ ಹೀನಸ್ಥಿತಿಗೆ ಬರುವದು. ಇದನ್ನ ತಪ್ಪಿಸುವದು ನಮಗೆ ಮುಖ್ಯಕರ್ತವ್ಯ ಯಾವಯಾವ ಕೈಗಾರಿಕೆಗಳನ್ನು ನಾವು ಶೀಘ್ರದಲ್ಲಿಯೇ ಅಭಿವೃದ್ಧಿಗೆ ತಂದು ನಮ್ಮ ದೇಶೀಯರ ಆತ್ಮಾವಲಂಬನೆಗೆ ಅವಕಾಶವನ್ನುಂಟುಮಾಡಬಹುದೋ ಅದನ್ನು ಇಲ್ಲಿ ಸೂಚಿಸುತ್ತೇನೆ. ನೇಗೆಯ ಕೆಲಸ, ಬಡಗೀ ಕೆಲಸ, ಕಬ್ಬಿಣ, ತಾಂಬ್ರ ಮೊದಲಾದವುಗಳಲ್ಲಿ ಮಾಡತಕ್ಕ ಕೆಲಸ, ಚಿನ್ನ ಮತ್ತು ಬೆಳ್ಳೀಲಸ, ಗಾರೇ ಕೆಲಸ, ಕಲ್ಲುಕೆಲಸ, ಕುಂಬಾರಕೆಲಸ ಬಣ್ಣ ಹಾಕತಕ್ಕ ಕೆಲಸ, ಚಮಡದ ಸಾಮಾನು ಮಾಡತಕ್ಕ ಕೆಲಸ, ನಾನಾವಿಧವಾದ ಹಗ್ಗಗಳನ್ನು ಮಾಡತಕ್ಕ ಕೆಲಸ, ಚಿತ್ತ ಬೊಂಬೆಗಳು ಮೊದಲಾದವುಗಳಿಂದ ಉಪಯುಕ್ತವಾದ ಸಾಮಾನುಗಳನ್ನು ಮಾಡತಕ್ಕ ಕೆಲಸ, ಗಾಜಿನಕೆಲಸ, ಅರಗಿನಕೆಲಸ, ಕೊಂಬು ಮತ್ತು ದಂತದಕೆಲಸ ಕಸೂತೀಕೆಲಸ, ಸಕ್ಕರೆಯನ್ನು ಮಾಡುವ ಕೆಲಸ, ಹೋಗೇಸೊಪ್ಪಿನಕೆಲಸ ಎಣ್ಣೀ ತೆಗೆಯತಕ್ಕ ಕೆಲಸ, ಧಾನ್ಯಗಳನ್ನು ಯಂತ್ರಗಳಿಂದ ಹಿಟ್ಟುಮಾಡತಕ್ಕ ಕೆಲಸ, ಇವೆಲ್ಲಾ ಮೊದಲಾದ ಅನೇಕಕೆಲಸಗಳು ಸ್ವಶಕ್ತಿಯಿಂದ ಜೀವಿಸುವದಕ್ಕೆ ಜನಗಳಿಗೆ ಅತ್ಯಂತ ಉಪಯುಕ್ತವಾದವುಗಳು, ಇವುಗಳಲ್ಲಿ ಎಲ್ಲಿ ಎಲ್ಲಿ ಯಾವಯಾವದಕ್ಕೆ ಗಿರಾಕಿಯು ವಿಶೇಷವಾಗಿರುವದೋ ಅದಕ್ಕೆ ಅವಕಾಶವನ್ನು ಮಾಡಬೇಕು. ಹತ್ತಿ ಮೊದಲಾದ ಅನೇಕ ಪದಾರ್ಥಗಳು ದೇಶಾಂತರಕ್ಕೆ ರಫ್ತುಮಾಡಲ್ಪಟ್ಟು ಅಲ್ಲಿಂದ ಬಟ್ಟೇಬರೆಗಳಾಗಿ ತಯಾರಾಗಿ ಬರುತ್ತವೆ. ದೇಶಾಂತರದವರು ಯಂತ್ರಸಹಾಯದಿಂದ ಹೇಗೆ ಈ ಸರಕುಗಳನ್ನು ತಯಾರುಮಾಡುತ್ತಾರೋ ಹಾಗೆಯೇ ನಾವೂ ಮಾಡುತ್ತಾ ಬಂದರೆ ದೇಶಾಂತರದಿಂದ ಬಟ್ಟೆಗಳನ್ನು ತರಿಸಿಕೊಳ್ಳುವದಕ್ಕೆ ಬದಲು ನಮ್ಮ ದೇಶಕ್ಕೆ ಬೇಕಾದಷ್ಟು ಬಟ್ಟೇಬರೆಗಳನ್ನು ನಾವೇ ತಯಾರ್ಮಾಡಿಕೊಳ್ಳಬಹುದು. ದೇಶಾಂತರಗಳಿಗೂ ಕೂಡ ನಾವು ಕಳುಹಿಸಲೂ ಬಹುದು. ೧೯೦೫ನೇ ಇಸವಿಯಲ್ಲಿ ೧ ಕೋಟಿಯೂ ಅರವತ್ತು ಲಕ್ಷ ರೂಪಾಯಿನ ಎಣ್ಣೇಬೀಜವು ನಮ್ಮ ದೇಶದಿಂದ ಹೊರಕ್ಕೆ ರಫ್ತಾಯಿತು ಹೊರಗಿನಿಂದ ಎರಡುಕೋಟಿ ಇಪ್ಪತ್ತು ಲಕ್ಷ ಪೌನಿನ ಎಣ್ಣೆಯನ್ನು ನಾವು ತರಿಸಿಕೊಂಡೆವು. ನಮ್ಮ ದೇಶದಲ್ಲಿಯೂ ಎಣ್ಣೆಯನ್ನು ತೆಗೆಯತಕ್ಕ ಯಂತ್ರಗಳಿವೆ. ಆದರೆ ಈ ಕೆಲಸವನ್ನು ಚನ್ನಾಗಿ ಮಾಡಬೇಕೆಂಬ ಶ್ರದ್ಧೆ ಮಾತ್ರ ಚನ್ನಾಗಿ ಇಲ್ಲಾ. ಈ ಶ್ರದ್ಧೆಯ ಅಭಾವದಿಂದ ಕಳೆದ ೧೦ ವರುಷಗಳಲ್ಲಿ ೪೭ ಯಂತ್ರಗಳು ಕೆಲಸಮಾಡತಕ್ಕವರಿಲ್ಲದೆ ಮಣ್ಣು ಹಿಡಿಯುವುದಕ್ಕೆ ಉಪಕ್ರಮವಾಯಿತು. ಇದಕ್ಕೆ ಕಾರಣ ಉಂಟು. ದೇಶಾಂತರದಲ್ಲಿ ಬಹಳ ಸುಲಭವಾಗಿ ಯ

ಣ್ಣೆಯನ್ನು ತೆಗೆಯತಕ್ಕ ಯಂತ್ರಗಳು ಉಪಯೋಗದಲ್ಲಿವೆ. ಅಂಥಾ ಯಂತ್ರಗಳನ್ನು ನಾವು ಕಲ್ಪಿಸಿಕೊಂಡಿಲ್ಲ. ಎಣ್ಣೇ ಬೀಜಗಳನ್ನು ದೇಶಾಂತರಗಳಿಗೆ ಕಳುಹಿಸುವುದು ಲಾಭಕರವಾಗಿರುವುದೇ ಹೊರತು ಎಣ್ಣೆಯನ್ನು ಮಾಡಿ ಕಳುಹಿಸುವುದು ಲಾಭಕರವಾಗಿಲ್ಲ. ಇದರಿಂದಲೇ ಜನಗಳು ಬೀಜಗಳನ್ನು ದೇಶಾಂತರಕ್ಕೆ ಕಳುಹಿಸುವದನ್ನು ಇಟ್ಟುಕೊಂಡಿರುತ್ತಾರೆ. ಇದರಿಂದ ಬಹಳ ಅನರ್ಥ ಉಂಟು ನಾವೇ ಎಣ್ಣೆಯನ್ನು ಮಾಡಿ ದೇಶಾಂತರಕ್ಕೆ ಕಳುಹಿಸಿದರೆ, ಎಣ್ಣೆ ಮಾತ್ರ ರಫ್ತಾಗುವುದು, ಜಮೀನಿನ ಅಭಿವೃದ್ಧಿಗೆ ಅತ್ಯವಶ್ಯಕವಾದ ಗೊಬ್ಬರವಾಗುವ ಪದಾರ್ಥಗಳು ನಮ್ಮ ದೇಶದಲ್ಲಿಯೇ ಉಳಿಯುವುದು. ನಮ್ಮ ಭೂಮಿಯು ಫಲವತ್ತಾಗುವದಕ್ಕೆ ಇದು ಅತ್ಯಂತ ಸಾಧಕವಾಗುವುದು. ಎಣ್ಣೇ ಬೀಜವನ್ನು ದೇಶಾಂತರಕ್ಕೆ ಕಳುಹಿಸುವುದರಿಂದ ನಮ್ಮ ದೇಶದ ಜಮೀನಿನ ಫಲವತ್ತಿಗೆ ಸಾಧಕವಾದ ಪದಾರ್ಥಗಳೂ ಕೂಡ ದೇಶಾಂತರಕ್ಕೆ ಕಳುಹಿಸಲ್ಪಡುವುವು. ಇದಲ್ಲದೇ ಧಾನ್ಯಗಳನ್ನೂ ಕೂಡ ನಾವು ದೇಶಾಂತರಗಳಿ ವಿಶೇಷವಾಗಿ ಕಳುಹಿಸುತ್ತಲಿದ್ದೇವೆ. ದೇಶಾಂತರದಿಂದ ಹಿಟ್ಟನ್ನು ತರಿಸಿಕೊಳ್ಳುತ್ತೇವೆ. ಧಾನ್ಯವನ್ನು ಹಿಟ್ಟುಮಾಡತಕ್ಕ ಕೆಲಸದಲ್ಲಿ ಬೊಂಬಾಯಿ ಪಟ್ಟಣದಲ್ಲಿ ಲಕ್ಷ ೭೬ ಸಾವಿರಜನಗಳಿಗೆ ಕೆಲಸ ಸಿಕ್ಕುತ್ತದೆ. ನಮ್ಮದೇಶದಲ್ಲಿ ಬೆಳೆದ ಗೋಧಿ ಮೊದಲಾದವುಗಳಿಂದ ದೇಶಾಂತರದಲ್ಲಿ ಕೋಟ್ಯಂತರ ಜನಗಳಿಗೆ ಉದ್ಯೋಗವು ಸಿಕ್ಕುವುದು. ಇದರಿಂದಲೇ ಸ್ವಂತವಾಗಿ ಕೈಗಾರಿಕೆಗಳನ್ನು ಮಾಡುವುದರಿಂದ ಜೀವನವನ್ನು ಹೇಗೆ ಸಂಪಾದಿಸಿಕೊಳ್ಳಬಹುದೋ ಆ ವಿಷಯವನ್ನು ನಾವು ಮಾಡಿರುತ್ತೇವೆ ಎಂಬುವುದು ಅಥವಾ ನಾವು ತಿಳಿದುಕೊಂಡಿಲ್ಲವೆಂಬುವುದು, ಸ್ಪಷ್ಟವಾಗುತ್ತದೆ. ಈ ವಿಷಯವನ್ನು ಪರ್ಯಾಲೋಚಿಸಿ ಉದ್ಯೋಗದಿಂದ ಸುಲಭವಾಗಿ ಉದರಪೋಷಣೆಯನ್ನು ಮಾಡಿಕೊಳ್ಳುವುದಕ್ಕೆ ನಮ್ಮ ಜನಗಳಿಗೆ ತಕ್ಕ ಸೌಲಭ್ಯವನ್ನು ನಾವು ಕಲ್ಪಿಸಬೇಕು. ಕಳೆದ ವರುಷ ಅಹಮದಾಬಾದಿ ಕಾನ್‌ಫರೆನ್ಸ್‌ನಲ್ಲಿ ನಾನು ಹೇಳಿದ ಒಂದು ವಿಷಯವು ಈಗಲೂ ಸ್ಮರಣೆಗೆ ಬರುತ್ತದೆ. ಗುವದು, ಕೈಗಾರಿಕೆಗಳಿಗೆ ಸಹಾಯಮಾಡತಕ್ಕವರು ದೇಶದ ಪ್ರಜೆಗಳಲ್ಲಿ ಅತಿವೃಷ್ಟಿ ಅನಾವೃಷ್ಟಿಯು ದೆಸೆಯಿಂದ ಬಹಳವಾಗಿ ಹತರಾಗತಕ್ಕವರ್ಯಾರು, ಎಂದು ಪರ್ಯಾಲೋಚಿಸಬೇಕು. ಕೃಷಿಯಿಂದ ಜೀವಿಸತಕ್ಕವರು ಎಂಥಾ ಕಷ್ಟಕಾಲದಲ್ಲಿಯೂ ದೇಹಧಾರಣೆಯನ್ನು ಮಾಡುವದಕ್ಕೆ ಸಾಕಾದಷ್ಟು ದವಸವನ್ನು ಹೇಗಾದರೂ ಹೊಂದುವರು. ಎಂಥಾ ಕ್ಷಾಮ ಬಂದಾಗ್ಯೂ ಇವರಿಗೆ ತೊಂದರೆಯು ಬರುವದಿಲ್ಲ. ಕೈಗಾರಿಕೆಗಳಿಂದಲೂ ಕೂಲಿಯಿಂದಲೂ ಜೀವನ ಮಾಡತಕ್ಕವರಿಗೆ ಹೀಗಾಗುವದಿಲ್ಲ. ಬಹುಜನ ಕೂಲಿಯವರಿಗೆ ಸುಭಿಕ್ಷವಾಗಿಯೂ ದವಸಗಳು ಅಗ್ಗವಾಗಿಯೂ ಇರುವ ಕಾಲದಲ್ಲಿ ತೊಂದರೆಗಳ್ಯಾವದೂ ಇರುವದಿಲ್ಲ. ದವಸಧಾನ್ಯಗಳು ತಗ್ಗಿದ ಕಾಲದಲ್ಲಿ ಇವರು ಸಂಪಾದಿಸತಕ್ಕ ಕೂಲಿಗೆ ಇವರಿಗೆ ಬೇಕಾದಷ್ಟು

ಧಾನ್ಯವು ಸಿಕ್ಕುವದಿಲ್ಲ. ಆಗ ದೇಹಧಾರಣೆಗೆ ಬೇಕಾದಷ್ಟು ಅನ್ನೋದಕಗಳು ಸಿಕ್ಕದೇ ಹೋಗುವದರಿಂದ ಅವರಿಗೆ ನಿವಾರಣೀಯವಾದ ರೋಗಗಳೂ ಅಕಾಲಮರಣಗಳೂ ಸಂಭವಿಸುವವು. ಇಂಥಾ ಅನರ್ಥಗಳೆಲ್ಲಾ ಗ್ರಾಮಾಂತರದಲ್ಲಿರತಕ್ಕ ಕೈಗಾರಿಕೆಯವರಿಗೂ ಕೂಲಿಯವರಿಗೂ ಮಾತ್ರವೇ ಅಲ್ಲದೆ ಪುರನಿವಾಸಿಗಳಿಗೂ ಕೂಡ ಸಂಭವಿಸುವವು. ಕಂಚುಗಾರರು, ಹಿತ್ತಾಳೆ ತಾಂಬ್ರ ಮೊದಲಾದ ಲೋಹಗಳಲ್ಲಿ ಕೆಲಸಮಾಡತಕ್ಕವರು, ಕುಂಬಾರರು, ಕಬ್ಬಿಣಕೆಲಸದವರು, ಬಡಗಿಯವರು, ಕಾರಖಾನೆಗಳಲ್ಲಿ ಕೂಲೀ ಮಾಡತಕ್ಕವರು, ಇವರುಗಳಲ್ಲಿ ಅನೇಕರು ಕ್ಷಾಮವು ಬಿದ್ದ ಕೂಡಲೆ ಅಕಾಲಮರಣಕ್ಕೆ ಗುರಿಯಾಗುವರು. ಅವರ ಮನೇ ಮಠಗಳನ್ನೂ, ಅವರು ಪಡುವ ಕಷ್ಟಗಳನ್ನೂ ಅವರ ದರಿದ್ರಾವಸ್ಥೆಯನ್ನೂ ಇದರಿಂದ ಉಂಟಾಗತಕ್ಕ ರೋಗಾದಿಗಳನ್ನೂ ಇದರಿಂದ ಅವರಿಗೆ ಉಂಟಾಗತಕ್ಕ ಅಕಾಲಮರಣಗಳನ್ನೂ ನೋಡಿದರೆ ಯಾರಿಗೆ ತಾನೇ ಸಂಕಟವಾಗುವದಿಲ್ಲ?

ಇಂಥಾ ಕಷ್ಟಗಳನ್ನು ತಪ್ಪಿಸುವದು ನಮಗೆ ಕರ್ತವ್ಯವಾದದ್ದು. ಇದು ಸುಲಭವಾದ ಕೆಲಸವಲ್ಲ. ಆದಾಗ್ಯೂ ನಮಗೆ ಈ ಕಷ್ಟಗಳನ್ನು ತಪ್ಪಿಸುವದು ಮುಖ್ಯ ಕರ್ತವ್ಯ. ಯಾವ ಜನಾಂಗದವರು ಕೈಗಾರಿಕೆಗಳನ್ನು ಮಾಡುವದಕ್ಕೆ ನೂತನವಾದ ಯಂತ್ರವಿಶೇಷಗಳನ್ನು ಉಪಯೋಗಿಸುವರೋ ಅವರೊಡನೆ ನಾವು ಪೋಟಾಪೋಟಿಯನ್ನು ಮಾಡಬೇಕು. ಆದರೆ ಕೈಕೆಲಸದಿಂದ ಪೋಟಾಪೋಟಿಯನ್ನು ಮಾಡುವದಕ್ಕಾಗುವದಿಲ್ಲ. ನಾವು ಅವರಂತೆ ಯಂತ್ರಗಳನ್ನು ಉಪಯೋಗಿಸಬೇಕು. ಯಂತ್ರಗಳನ್ನು ಉಪಯೋಗಿಸಬೇಕಾದರೆ ಅವುಗಳನ್ನು ನಿರ್ಮಾಣಮಾಡುವದನ್ನು ತಿಳಿದುಕೊಳ್ಳಬೇಕು. ಯಂತ್ರನಿರ್ಮಾಣಶಕ್ತಿಯಲ್ಲಿ ನಾವು ಪಾಶ್ಚಾತ್ಯರಿಗಿಂತಲೂ ಹೆಚ್ಚಾಗಬೇಕು. ನಮ್ಮಲ್ಲಿ ಯಂತ್ರಗಳನ್ನು ಮಾಡುವದು ಈಗತಾನೇ ಉಪಕ್ರಮವಾಗಿ ಇದೆ. ಕಾಲುವೆಗಳನ್ನು ಕಟ್ಟಿ ಪಾಶ್ಚಾತ್ಯರಂತೆ ಭಾರೀಕೆಲಸಗಳನ್ನು ಮಾಡುವದು ಕೂಡ ಈಗತಾನೇ ನಮ್ಮಲ್ಲಿ ಉಪಕ್ರಮವಾಗಿ ಇದೆ. ನಮ್ಮ ಜನಗಳಲ್ಲಿ ಹೊಸಕೆಲಸಗಳನ್ನು ಮಾಡುವ ಧೈರ್ಯವು ಜನಗಳಿಗಿಲ್ಲ. ಹೊಸ ಕೆಲಸವನ್ನು ಉಪಕ್ರಮಿಸಿದರೆ ಮೊದಲಿನಲ್ಲಿ ಕೆಲಸವು ಕೆಡುವದೂ ನುಕ್ಸಾನಾಗುವದೂ ಉಂಟು. ಯಾವ ಕೆಲಸ ಸಮಗ್ರವಾಗಿ ಬರಬೇಕಾದರೂ ಪ್ರಥಮತಃ ತಪ್ಪುಗಳನ್ನು ಮಾಡಿ ಅದನ್ನು ತಿದ್ದಿಕೊಂಡು ಹೀಗೆಯೇ ಅನೇಕಾವರ್ತಿ ಆದಮೇಲೆ ತಪ್ಪಿಲ್ಲದೆ ಮಾಡುವ ಸಾಮರ್ಥ್ಯವು ದೊರೆಯುವದು. ತಪ್ಪುಮಾಡಿದ ಮಾತ್ರದಿಂದಲೇ ಹೆದರಿಕೊಂಡು ಕೆಲಸ ಮಾಡುವದನ್ನು ಬಿಟ್ಟರೆ ಹಾಗೆ ಕೆಲಸಬಿಡತಕ್ಕವರು ಎಂದಿಗಾದರೂ ವೃದ್ಧಿಗೆ ಬರುವರೇ? ಸ್ಟೀಮ್‌ಎಂಜಿನ್‌ಗಳೂ ವಿದ್ಯುಚ್ಛಕ್ತಿಯ ಎಂಜಿನ್‌ಗಳೂ ಈಗ ತಯಾರಾಗುತ್ತಲಿವೆ. ದೇಶದಿಂದ ದೇಶಕ್ಕೆ ಸಂಚಾರವು ಸುಲಭವಾಗುತ್ತಲಿದೆ. ಒಂದುದೇಶದ ವರ್ತಮಾನ ಮತ್ತೊಂದು ದೇಶಕ್ಕೆ ತಿಳಿಯುವಂತೆ ಮಾಡುವ ಏರ್ಪಾಡುಗಳು ವಿಶೇಷವಾಗುತ್ತಲಿವೆ. ಲೋಕವ್ಯವಹಾರಜ್ಞಾ

ನವನ್ನು ಸಂಪಾದಿಸುವದಕ್ಕೆ ಸಾಧನಗಳೂ ಹೆಚ್ಚುತ್ತಲಿವೆ. ಸಮಸ್ತ ಭೂತವಸ್ತುಗಳನ್ನೂ ಹತೋಟಿಯಲ್ಲಿಟ್ಟುಕೊಂಡು ಅವುಗಳಿಂದ ಕೆಲಸವನ್ನು ತೆಗೆಯುವ ವಿಧಾನಗಳೂ ರೂಢಿಗೆ ಬರುತ್ತಲಿವೆ. ಇಂಥಾ ಕೆಲಸಗಳನ್ನೆಲ್ಲಾ ಚನ್ನಾಗಿ ಮಾಡಿಸುವದರಲ್ಲಿ ನಾವು ಉದ್ಯುಕ್ತರಾಗುತ್ತಾ ಬಂದರೆ ಸುಖವಾದ ಜೀವಿಕೆಗಳನ್ನು ಸಂಪಾದಿಸಿಕೊಳ್ಳುವದಕ್ಕೆ ಜನರಿಗೆ ಶಕ್ತಿಯನ್ನುಂಟುಮಾಡುವದು ಕಷ್ಟವಲ್ಲ. ಇಂಥಾ ಮಹತ್ಕಾರ್ಯಗಳಿಗೆ ಬೇಕಾದದ್ದು ಬಂಡವಾಳ. ಈ ಬಂಡವಾಳವನ್ನು ಅನುಕೂಲಪಡಿಸುವದಕ್ಕೆ ಪರಸ್ಪರ ಸಹಾಯದ ಏರ್ಪಾಡುಗಳು ಬಹಳ ಪ್ರಯೋಜನಕರವಾದವುಗಳು. ಇವುಗಳ ಮಾರ್ಗಗಳನ್ನು ಜನಗಳಿಗೆ ತಿಳಿಸಿದರೆ ಅವರು ಅಸಹಾಯ ಶೂರರಾಗಿ ತಮ್ಮ ಕೆಲಸಗಳನ್ನು ಮಾಡುವದರಲ್ಲಿ ಸಂದೇಹವಿಲ್ಲ. ಜನಗಳು ಕಾಲವು ಬಹಳ ಬೆಲೆಯುಳ್ಳದ್ದೆಂಬದಾಗಿ ತಿಳಿದುಕೊಂಡು ಅದನ್ನು ಕೆಲಸಗಳ ಮಾರ್ಗಗಳನ್ನು ತಿಳಿದುಕೊಳ್ಳುವದರಲ್ಲಿ ವಿನಿಯೋಗಿಸುತ್ತಾ ಬಂದರೆ ಅದರಿಂದ ಎಷ್ಟೋ ಪ್ರಯೋಜನವಾಗಬಹುದು.

ಸ್ವದೇಶೀ ಏರ್ಪಾಡುಗಳು ಜನಗಳಿಗೆ ಆತ್ಮಾವಲಂಬನೆಯನ್ನುಂಟುಮಾಡತಕ್ಕ ಕೆಲಸಗಳನ್ನು ಅಭಿವೃದ್ಧಿಗೆ ತರುವುದಕ್ಕೆ ಬಹಳ ಸಾಧಕವಾದವುಗಳು. ಸ್ವದೇಶೀ ಮಾರ್ಗಗಳನ್ನು ಚನ್ನಾಗಿ ತಿಳಿದುಕೊಂಡರೆ ಅದರಿಂದ ಬಹಳ ಪ್ರಯೋಜನವುಂಟಾಗುವುದು. ಸ್ವಲ್ಪ ಖರ್ಚಿನಲ್ಲಿ ತುಂಬಾ ಉತ್ಪತ್ತಿಯನ್ನು ಮಾಡುವುದು ಸ್ವದೇಶೀ ಏರ್ಪಾಡಾಗಿರುವುದು. ಸ್ವದೇಶೀ ಸರಕುಗಳಿಗಿಂತಲೂ, ವಿದೇಶೀ ಸರಕುಗಳು ನಯವಾಗಿಯೂ, ಸುಲಭವಾಗಿಯೂ ಇರುವುದುಂಟು. ನಯವನ್ನೂ ಸೌಲಭ್ಯವನ್ನೂ ಉಂಟುಮಾಡಬೇಕಾದರೆ ಕ್ರಮಕ್ರಮವಾಗಿ ಅಭ್ಯಾಸವನ್ನು ಹೆಚ್ಚಿಸಬೇಕು. ಹೆಚ್ಚು ಅಭ್ಯಾಸವಾದ ಹಾಗೆಲ್ಲಾ ನಯವೂ ಸೌಲಭ್ಯವೂ ಉಂಟಾಗುವುದು. ಇವೆರಡನ್ನೂ ಸಂಪಾದಿಸಬೇಕಾದರೆ ಆದಿಭಾಗದಲ್ಲಿ ಪ್ರೋತ್ಸಾಹರೂಪವಾದ ಗಿರಾಕಿಯೂ ಬೇಕು. ಅಂಥಾ ಗಿರಾಕಿಯು ಬರದೇ ಇದ್ದರೆ, ನಯವೂ ಸೌಲಭ್ಯವೂ ಬರುವುದೇ ಇಲ್ಲಾ. ಇದಕ್ಕಾಗಿ ಆದಿಭಾಗಲ್ಲಿ ಸ್ವಲ್ಪ ನಷ್ಟವನ್ನು ಹೊಂದುವದಕ್ಕೂ ಕೂಡ ಮನಸ್ಸುಮಾಡಬೇಕು. ವಿದೇಶೀ ಸರಕುಗಳು ಸುಲಭ ಖರೀದಿಗೆ ಸಿಕ್ಕಿದಾಗ್ಯೂ ಸ್ವದೇಶೀ ಸರಕುಗಳು ಸ್ವಲ್ಪ ತಗ್ಗಾಗಿದ್ದಾಗ್ಯೂ ಸ್ವದೇಶೀ ಸರಕುಗಳಿಗೇ ನಾವು ಗಿರಾಕಿಯನ್ನು ಕೊಡಬೇಕು. ಹಾಗೆ ಕೆಲವು ದಿವಸಗಳು ನೋಡಿ ಪಾಶ್ಚಾತ್ಯರಲ್ಲಿ ರೂಢಿಯಾಗಿರುವ ಯಂತ್ರಗಳನ್ನು ನಿರ್ಮಾಣಮಾಡಿಕೊಳ್ಳುವುದಕ್ಕೂ ಅಂಥಾ ಯಂತ್ರಗಳಿಂದ ಕೆಲಸವನ್ನು ಮಾಡಿಸುವುದಕ್ಕೂ ತಕ್ಕ ಏರ್ಪಾಡನ್ನು ಮಾಡುತ್ತಾ ಬಂದರೆ ಅದರಿಂದ ನಮ್ಮ ದೇಶದ ದುರವಸ್ಥೆಯು ಪರಿಹಾರವಾಗುವುದು. ಹೀಗೆ ಮಾಡಬೇಕಾದರೆ ನಮ್ಮ ದೇಶೀಯರಿಗೆಲ್ಲಾ

ಹೀಗೂ ದೇಶಾಭಿಮಾನ ಉಂಟಾಗಬೇಕು. ಸ್ವದೇಶೀ ಏರ್ಪಾಡುಗಳಿಗೆ ಎಲ್ಲರೂ ಸಹಾಯ ಮಾಡಬೇಕು. ಪಾಶ್ಚಾತ್ಯರು ಸ್ವದೇಶೀ ಏರ್ಪಾಡುಗಳನ್ನು ಮಾಡಿಕೊಳ್ಳುವದರಲ್ಲಿ ಅತ್ಯಂತ ನಿಪುಣರು. ಇದಕ್ಕೆ ಒಂದು ಉದಾಹರಣೆಯನ್ನು ಹೇಳುತ್ತೇನೆ—ನಮ್ಮ ದೇಶದಲ್ಲಿ ಸಕ್ಕರೆಯ ಕಾರ್ಖಾನೆಗಳು ಒಂದಾನೊಂದು ಕಾಲದಲ್ಲಿ ಬಹಳ ವಿಶೇಷವಾಗಿದ್ದವು ಕಬ್ಬಿನಿಂದ ಸಕ್ಕರೆಯು ವಿಶೇಷವಾಗಿ ಮಾಡಲ್ಪಡುತ್ತಿತ್ತು. ಜರ್ಮನೀ ಮತ್ತು ಆಸ್ಟ್ರಿಯಾ ಹಂಗೇರಿಯವರು ಅವರ ದೇಶದ ಸಕ್ಕರೆಯನ್ನು ನಮ್ಮ ದೇಶಕ್ಕೆ ಕಳುಹಿಸುವ ಏರ್ಪಾಡನ್ನು ಮಾಡಿದರು. ಅಂಥ ಸಕ್ಕರೆಗಳಿಗೆ ಉದ್ದೇಶದಲ್ಲಿ ಸುಂಕಗಳನ್ನು ಹಾಕುವದಕ್ಕೆ ಉಪಕ್ರಮಿಸಿದಾಗ್ಯೂ ಆ ಸುಂಕವನ್ನು ಕೊಟ್ಟು ನಮ್ಮ ದೇಶದ ಸಕ್ಕರೆಗಿಂತಲೂ, ಸುಲಭಕ್ರಯಕ್ಕೆ ಮಾರುವದಕ್ಕೆ ಉಪಕ್ರಮಿಸಿದರು. ಇದರಿಂದ ನಮ್ಮ ದೇಶದ ಸಕ್ಕರೆಯ ನಿರ್ಮಾಣವು ಮೂಲೆಗೆ ಬಿತ್ತು. ಅವರ ದೇಶದಲ್ಲಿ ಸಕ್ಕರೆಯ ಉತ್ಪತ್ತಿಯು ಹೆಚ್ಚುತ್ತಾ ಬಂತು. ಇದರ ಕಾರಣವನ್ನು ಪರಿಶೀಲಿಸಿದರೆ ಅವರ ಗವರ್ನಮೆಂಟಿನವರು ಬುದ್ಧಿಶಾಲಿಗಳಾಗಿಯೂ ನಮ್ಮ ದೇಶದ ಗವರ್ನಮೆಂಟಿನವರು ಪ್ರಜೆಗಳ ಯೋಗಕ್ಷೇಮಚಿಂತೆಯನ್ನು ಹೇಗೆ ಮಾಡಬೇಕೋ ಅದನ್ನು ಅರಿಯದವರೆಂಬುದಾಗಿಯೂ ಚನ್ನಾಗಿ ಗೊತ್ತಾಗುತ್ತದೆ ನಮ್ಮ ದೇಶದ ಸಕ್ಕರೆಗೆ ಗಿರಾಕಿಯು ತಪ್ಪದೇ ಇರಲೆಂದು ನಮ್ಮ ಸರಕಾರದವರು ಸಕ್ಕರೆಗಳಿಗೆ ಸುಂಕವನ್ನು ಹಾಕಿದರೆ ಅವಕ್ಕೆ ಹೆದರಿಕೊಂಡು ಅವರು ಸಕ್ಕರೆಯನ್ನು ತಯಾರು ಮಾಡುವದನ್ನು ಬಿಟ್ಟುಬಿಟ್ಟರೆ ಅವರ ದೇಶೀಯರಲ್ಲಿ ಸಕ್ಕರೆಯನ್ನು ತಯಾರುಮಾಡತಕ್ಕ ಬಡಜನಗಳಿಗೆ ಜೀವನವೇ ತಪ್ಪುತ್ತಿತ್ತು. ಅವರ ಜ್ಞಾನವು ಹೆಚ್ಚುತ್ತಲಿರುವದು ದಾರಿದ್ರ್ಯವು ಹರಿದುಕೊಳ್ಳುತ್ತಿರುವದು ರೋಗಾದಿಗಳು ನಮ್ಮದೇಶದಲ್ಲಿರತಕ್ಕ ನ್ಯೂನತೆಯನ್ನು ಪ್ರಕಾಶಪಡಿಸುತ್ತವೆ. ಈ ನ್ಯೂನತೆಯನ್ನು ನಾವು ಪರಿಹಾರಮಾಡಿಕೊಳ್ಳದೇ ಇದ್ದರೆ ನಮ್ಮ ದೇಶಕ್ಕೆ ಅನಿರ್ವಚನೀಯವಾದ ಹಾನಿಯು ಉಂಟಾಗುವದು. ನಾವು ದಿನೇದಿನೇ ಹೆಚ್ಚಾಗಿ ದರಿದ್ರರಾಗಿಯೂ, ದುರ್ಬಲರಾಗಿಯೂ ಆಗುವೆವು. ನಮ್ಮ ಕೈಗಾರಿಕೆಗಳೆಲ್ಲಾ ನಾಶವಾಗುವವು. ನಾವು ಸೇವಕಾವೃತ್ತಿಯಲ್ಲಿ ಮಾತ್ರವೇ ಜೀವಿಕೆಯನ್ನು ಹೊಂದುವದಕ್ಕೆ ಅವಕಾಶವನ್ನು ಹೊಂದುವೆವು. ನಮ್ಮ ಕೈಗಾರಿಕೆಗಳನ್ನು ಕ್ರಮಪಡಿಸಿಕೊಂಡರೆ ನಾಗರಿಕರಾದ ಪರದೇಶೀಯರಂತೆ ನಾವೂ ವೃದ್ಧಿಗೆ ಬರುವದಕ್ಕೆ ಅವಕಾಶವಾಗುವದು. ನಮ್ಮ ದೇಶಕ್ಕೆ ವಿಷಮಕಾಲವು ಬಂದಿರುವದು. ಉಪಯುಕ್ತವಾದ ಕೈಗಾರಿಕೆಗಳನ್ನು ಮಾಡಿ ಸ್ವತಂತ್ರರಾಗಿ ಇರುವ ಪ್ರಯತ್ನವನ್ನು ನಾವು ಮಾಡಬೇಕು ಹಾಗಿಲ್ಲದಿದ್ದರೆ ಈ ಪ್ರಪಂಚದ ಜನಗಳೆಲ್ಲೆಲ್ಲಾ ಅತ್ಯಂತ ಹೀನವಾದ ಸ್ಥಿತಿಗೆ ನಾವು ಬರಬೇಕು ಇಂಥಾ ಅಕ್ಷೇಮಕರವಾದ ಸ್ಥಿತಿಗೆ ಬರುವದು ನಮಗೆ ಸುತರಾಂ ಯೋಗ್ಯವಾದದ್ದಲ್ಲ. ವೃದ್ಧಿಗೆ ಬರುವ ಏರ್ಪಾಡನ್ನು ಮಾಡಿಕೊಳ್ಳುವದರಲ್ಲಿ ನಾವು ಸ್ವಲ್ಪವೂ ಆಲಸರಾಗಬಾರದು

ನಮ್ಮ ದೇಶದಲ್ಲಿ ನ್ಯಾಷನಲ್ ಕಾಂಗ್ರೆಸ್ ಸಭೆಯವರು ಈ ವಸ್ತುಪ್ರದರ್ಶನಶಾಲೆಯ ಏರ್ಪಾಡನ್ನು ಮಾಡಿದ್ದರಿಂದ ನಮ್ಮ ನ್ಯೂನಾತಿರಿಕ್ತಗಳು ನಮಗೆ ತಿಳಿಯುವದಕ್ಕೆ ಆ

ವಕಾಶವಾಯಿತು. ಪ್ರದರ್ಶನಶಾಲೆಯ ಕೆಲಸವನ್ನು ಮಾಡುವದರಲ್ಲಿ ನಮ್ಮದೇಶದಲ್ಲಿ ಠಿಕೆಕ್ಕೆ ಸಮಸ್ತ ಪಂಗಡದವರೂ ಸೇರಿ ಪ್ರೋತ್ಸಾಹವನ್ನು ಮಾಡುವದಕ್ಕೆ ಅವಕಾಶವಾಯಿತು. ಇಂಡಿಯಾದೇಶದ ಯಾವಯಾವ ಭಾಗಗಳಲ್ಲಿ ಯಾವಯಾವ ಕೈಗಾರಿಕೆಗಳು ಒಳ್ಳೇಸ್ಥಿತಿಯಲ್ಲಿರುವವೋ ಅವುಗಳು ಪ್ರತಿಯೊಂದು ಭಾಗದವರಿಗೂ ತಿಳಿಯುವದಕ್ಕೆ ಅವಕಾಶವಾಯಿತು. ನಮ್ಮ ದೇಶೀಯರು ಪರಸ್ಪರ ಪ್ರೀತಿಯಿಂದ ಒಂದುಭಾಗದವರಿಗೆ ಮತ್ತೊಂದು ಭಾಗದವರು ಗಿರಾಕಿಯನ್ನು ಕಲ್ಪಿಸುವದಕ್ಕೂ ಅವಕಾಶವಾಯಿತು. ನಾನು ಯೂರೋಪ್ ಮತ್ತು ಅಮೇರಿಕಾಖಂಡಗಳಲ್ಲಿ ಅನೇಕ ಪಟ್ಟಣಗಳಿಗೆ ಹೋಗಿ ಅಲ್ಲಿ ನಡೆಯತಕ್ಕ ಉದ್ಯೋಗಗಳನ್ನು ಪರಿಶೀಲಿಸಿ ನೋಡಿರುತ್ತೇನೆ. ಅಲ್ಲಿನ ಕೆಲಸಗಳನ್ನು ನೋಡಿ ನಮ್ಮದೇಶದ ಕೆಲಸಗಳನ್ನು ನೋಡಿದರೆ ನಮ್ಮ ಹೀನಸ್ಥಿತಿಯು ಸ್ಪಷ್ಟವಾಗುವದು. ಪಾಶ್ಚಾತ್ಯ ಕೈಗಾರಿಕೆಯರು ಬಹುಕಾಲದಿಂದ ಕೆಲಸಮಾಡಿ ಅತ್ಯಂತ ನಿಪುಣರಾಗಿರುತ್ತಾರೆ. ಇಂಡಿಯಾದೇಶೀಯರಾದ ನಾವು ಬಹಳ ಶ್ರದ್ಧೆಯಿಂದ ಇಂಥಾ ಪ್ರದರ್ಶನಗಳಿಗೆ ಹೋಗಿ ಸಮಸ್ತ ಕೆಲಸಗಳ ಮರ್ಮಗಳನ್ನು ತಿಳಿದುಕೊಂಡು ಯಾವಯಾವ ದೇಶದಲ್ಲಿ ಯಾವಯಾವ ಪದಾರ್ಥಗಳು ತಯಾರಾಗುವವೋ ಅದನ್ನು ಪರಿಶೀಲಿಸಿ ಪರಸ್ಪರ ಸಹಾಯಭೂತರಾಗಿ ವೃದ್ಧಿಗೆ ಬರುವ ಏರ್ಪಾಡನ್ನು ಮಾಡಬೇಕು. ಸರಕಾರದವರ ಪ್ರೋತ್ಸಾಹದಿಂದಲೂ ಜನಗಳ ಸ್ಥೈರ್ಯದಿಂದಲೂ ಇಂಥಾ ಕೆಲಸಗಳು ವೃದ್ಧಿಗೆ ಬರುವಂತೆ ಮಾಡಿಕೊಳ್ಳುವದು ಕಷ್ಟವಲ್ಲ. ಕಳೆದವರ್ಷ ವಸ್ತುಪ್ರದರ್ಶನದ ಜೊತೆಗೆ ಕೈಗಾರಿಕೆಯ ಕಾನ್ಫರೆನ್ಸ್ ಎಂಬ ಸಭೆಯನ್ನು ನಾವು ಉಪಕ್ರಮಿಸಿದೆವು ಈ ಸಭೆಗೆ ನಮ್ಮ ರೆವಿನ್ಯೂ ಮಂತ್ರಿಗಳಾದ ಮಿ॥ ರ್ ಸಿ ದತ್ತರವರು ಅಧ್ಯಕ್ಷರಾಗಿದ್ದರು. ಈ ಕಾನ್ಫರೆನ್ಸ್ ಸಭೆಯ ಕೆಲಸವು ಅಂದರೆ ಯಾವ ಯಾವ ಕೈಗಾರಿಕೆಗಳಿಗೆ ಯಾವರೀತಿಯಾದ ಪ್ರೋತ್ಸಾಹವನ್ನು ಕಲ್ಪಿಸಬೇಕೋ ಅವುಗಳನ್ನು ಜಾರಿಗೆ ತರುವದಕ್ಕೆ ಏನುಮಾಡಬೇಕೋ ಅದನ್ನು ಪ್ರತಿದಿನದಲ್ಲಿಯೂ ಮಾಡುತ್ತಲಿರಬೇಕೇ ಹೊರತು ವರ್ಷಕ್ಕೊಂದಾವರ್ತಿ ಈಸಭೆಯಲ್ಲಿ ಪರ್ಯಾಲೋಚಿಸುವ ಪ್ರಯತ್ನದಲ್ಲಿ ಮಾತ್ರ ತೃಪ್ತರಾಗಕೂಡದೆಂದು ಕಳೆದ ವರ್ಷದ ಸಭೆಯಲ್ಲಿ ವ್ಯವಸ್ಥೆಯಾಯಿತು. ಕಲ್ಕತ್ತಾ, ಬೊಂಬಾಯಿ, ಮದರಾಸು, ಅಲಹಾಬಾದ್, ಲಾಹೋರ್, ನಾಗ್‌ಪೂರ್ ಪಟ್ಟಣಗಳಲ್ಲಿ ಆಯಾ ಸಂಸ್ಥಾನಗಳಿಗೆ ಸೇರಿದ ಕೈಗಾರಿಕೆಯ ಸ್ಟ್ಯಾಂಡಿಂಗ್ ಕಮಿಟಿಗಳು ಮಾಡಲ್ಪಟ್ಟವು. ಜಾಯಿಂಟಿಗ ಸೆಕ್ರೆಟರಿಗಳು ಮತ್ತು ಅಂಡರ್ ಸೆಕ್ರೆಟರಿಗಳೊಡನೆಯೂ ಕಾಗದಪತ್ರಗಳನ್ನು ನಡಿಸತಕ್ಕ ಅಧಿಕಾರವು ಕೊಡಲ್ಪಟ್ಟಿತು. ಈ ಕಮಿಟಿಯವರು ಉದಾಸೀನವನ್ನು ಮಾಡದೇ ಕಳೆದವರ್ಷದಕೆಲಸವನ್ನು ಒಂದು ಡೈರೆಕ್ಟರೀಯನ್ನಾಗಿ ಬರೆದಿರುತ್ತಾರೆ. ಈ ಪುಸ್ತಕದಲ್ಲಿ ಇಂಡಿಯಾ ದೇಶದ ಯಾವಯಾವ ಭಾಗದಲ್ಲಿ ಯಾವಯಾವ ಕೈಗಾರಿಗಳು ನಡೆಯುವವೋ, ಈ ಕೈಗಾರಿಕೆಯ ಸ್ಥಿತಿಯು ಹೇಗೆ ಇರುವದೋ, ಅದನ್ನೆಲ್ಲಾ ವಿವರಿಸಿ ಇರುವರು. ಇದಕ್ಕಿಂತ ಈ ಕೈಗಾರಿಕೆಗಳನ್ನು ಒಳ್ಳೇಸ್ಥಿತಿಗೆ ತರುವದಕ್ಕೆ ಯಾವಪ್ರಯತ್ನಗಳನ್ನು ಮಾಡಬೇಕೋ ಅವುಗಳನ್ನು ನಿಶ್ಚಯಿಸುವದಕ್ಕೂ ಅವಕಾಶವಾಗುವದು. ಈ ಕಮಿಟಿ

ಗಳಲ್ಲಿ ಒಂದು ನ್ಯೂನತೆಯುಂಟು ಅದನ್ನು ನಾವು ಬೇಗ ಪರಿಹಾರಮಾಡಿಕೊಳ್ಳಬೇಕು. ಒಂದು ಸೆಂಟ್ರಲ್ ಕಮಿಟಿ ಮಧ್ಯರಾಷ್ಟ್ರದಲ್ಲಿರಬೇಕು. ಪ್ರತಿಯೊಂದು ಪಟ್ಟಣದಲ್ಲಿಯೂ, ಪ್ರತಿಯೊಂದು ಕೈಗಾರಿಕೆಯು ನಡೆಯುತಕ್ಕ ಗ್ರಾಮಾಂತರಗಳಲ್ಲಿಯೂ ಒಂದು ಕಮಿಟಿಯ ಶಾಖೆಯು ಇರಬೇಕು. ಎಲ್ಲಾ ಕಡೆಗಳಿಂದಲೂ ಕೈಗಾರಿಕೆಗಳ ವಿಷಯದಲ್ಲಿ ತಪ್ಸೀಲ್‌ವಾರ್ ರಿಪೋರ್ಟುಗಳನ್ನು ತರಿಸಿಕೊಳ್ಳಬೇಕು. ನಾಗರಿಕರಾದ ಪಾಶ್ಚಾತ್ಯರು ಕೈಗಾರಿಕೆಗಳನ್ನು ಯಾವರೀತಿಯಲ್ಲಿ ಮಾಡಿ ಎಷ್ಟೆಷ್ಟು ಸಂಪಾದನೆಯನ್ನು ಯಾವರೀತಿಯಲ್ಲಿ ಮಾಡುವರೋ ಅದೇರೀತಿಯಲ್ಲಿ ಮಾಡುವದಕ್ಕೆ ನಾವು ಮಾಡಬೇಕೋ ಅದನ್ನು ಎಲ್ಲಾ ಪ್ರಾವಿನ್ಶಿಯಲ್ ಕಮಿಟಿಗಳ ಶಾಖೆಗೆ ಸಂಬಂಧಪಟ್ಟವರೂ ಪ್ರಚಾರಮಾಡುತ್ತಾ ಬರಬೇಕು. ಇಂಡಿಯಾದೇಶವು ಬಹಳವಿಸ್ತಾರವಾದದ್ದು.

ಒಂದೆರಡು ಕಮಿಟಿಗಳಿಂದ ಯಾವ ಕೆಲಸವೂ ಸಮರ್ಪಕವಾಗಿ ನಡೆಯಲಾರದು. ಸೆಂಟ್ರಲ್ ಕಮಿಟಿಗಳನ್ನೂ, ಕಮಿಟಿಗಳ ಶಾಖೆಗಳನ್ನೂ, ಮಾಡಿ ಅವುಗಳನ್ನು ತಮ್ಮ ದೇಶದ ಪ್ರತಿಯೊಂದು ಊರಿಗೂ, ಗ್ರಾಮಕ್ಕೂ, ಹರಡಿದ ಹೊರತು ಈ ಕೈಗಾರಿಕೆಗಳು ಅಭಿವೃದ್ಧಿಗೆ ಬಂದು ನಮ್ಮ ದೇಶೀಯರ ಹೀನಸ್ಥಿತಿ ತಪ್ಪುವದಕ್ಕೆ ಅವಕಾಶವಾಗುವದಿಲ್ಲ. ಈ ವಿಷಯವನ್ನು ದೇಶಾಭಿಮಾನಿಗಳಾದವರೆಲ್ಲರೂ ಪರಿಶೀಲಿಸಿ ಸಹಾಯಮಾಡುತ್ತಾ ಬರಬೇಕು.

ಹೀಗೆ ಸಹಾಯಮಾಡುವದಕ್ಕೆ ಯೋಗ್ಯತೆಯುಂಟಾಗಬೇಕಾದರೆ ತಿಳುವಳಿಕೆಯು ಅತ್ಯಾವಶ್ಯಕವಾದದ್ದು. ತಿಳುವಳಿಕೆಗೆ ವಿದ್ಯಾಭ್ಯಾಸವೇ ಮೂಲಕಾರಣ. ವಿದ್ಯಾಭ್ಯಾಸದ ಜೊತೆಗೆ ದೇಶಾಟನವೂ, ವಿಚಾರವೂ ಇರಬೇಕು. ಕೈಗಾರಿಕೆಗಳು ವೃದ್ಧಿಗೆ ಬರಬೇಕಾದರೆ ಲೋಕವ್ಯವಹಾರಜ್ಞಾನವನ್ನುಂಟುಮಾಡತಕ್ಕ ವಿದ್ಯಾಭ್ಯಾಸವು ಸಾಮಾನ್ಯ ಜನಗಳಲ್ಲಿ ವಿಶೇಷವಾಗಿ ವ್ಯಾಪಿಸುವಂತೆ ಮಾಡಲ್ಪಡಬೇಕು. ಹೀಗೆ ಮಾಡಿದರೆ ವಿದ್ಯಾಭ್ಯಾಸದ ಸಹಾಯದಿಂದ ಅನೇಕ ಉದ್ಯೋಗಗಳ ಮಾರ್ಗಗಳು ತಿಳಿಯುವದಕ್ಕೆ ಅವಕಾಶವಾಗುವದು. ಪ್ರಥಮತಃ ನಾವು ಪ್ರತಿಊರಿನಲ್ಲಿಯೂ ಮತ್ತು ಗ್ರಾಮದಲ್ಲಿಯೂ ವಿದ್ಯಾಭ್ಯಾಸವು ಲಭಿಸುವಂತೆ ಮಾಡಬೇಕು. ಪ್ರೈಮರೀ ವಿದ್ಯಾಭ್ಯಾಸವನ್ನಾದರೂ ಕಡ್ಡಾಯವಾಗಿ ಮಾಡಿಸುವ ಏರ್ಪಾಡನ್ನು ಮಾಡಬೇಕು. ಇಂಡಿಯಾ ಗವರ್ನ್ಮೆಂಟಿನವರು, ಪ್ರೈಮರೀ ವಿದ್ಯಾಭ್ಯಾಸವನ್ನು ಉಚಿತವಾಗಿ ಮಾಡಿಸುವ ಏರ್ಪಾಡನ್ನು ಪರ್ಯಾಲೋಚಿಸುತ್ತಲಿದ್ದಾರೆ. ಇದು ತುಂಬಾ ಸಂತೋಷಜನಕವಾದದ್ದು. ಉಚಿತವಾಗಿಯೂ, ಬಲಾತ್ಕಾರವಾಗಿಯೂ ಮಾಡಲ್ಪಡುವ ವಿದ್ಯಾಭ್ಯಾಸದ ಏರ್ಪಾಡು ನಮ್ಮ ದೇಶದಲ್ಲಿ ಹೊಸದಾದದ್ದು. ಇದು ಹೊಸ ಪದ್ಧತಿಯೆಂದು ನಾವು ಹೆದರಿಕೊಳ್ಳಕೂಡದು. ಪಾಶ್ಚಾತ್ಯ ಖಂಡಗಳಲ್ಲಿ ಕೆಲವು ಖಂಡದವರು ಸಮಸ್ತ ಜನಗಳಿಗೂ ಭೋಜನಗಳಿಗೂ ಸ್ನಾನಗಳಿಗೂ ಆವಶ್ಯಕವಾದ ಉಡಿಗೆಗಳಿಗೂ ಏರ್ಪಾಡು ಮಾಡಬೇಕೆಂದು ವಾದಿಸುವರು ಅಂಥಾ ವಿಷಯವನ್ನು ನಾನು ಸೂಚಿಸುವದಿಲ್ಲ. ಪ್ರೈಮರೀ ವಿದ್ಯಾಭ್ಯಾಸವು ಉಚಿತವಾಗಿಯೂ, ಕಡ್ಡಾಯವಾಗಿಯೂ ಇರಬೇಕೆಂದು ನಾನು ವಾದಿಸುತ್ತೇನೆ. ಇದು ತಪ್ಪೆಂದು ಯಾರೂ ಭಾವಿಸಲಾರರು.

ಬರೋಡಾ ಸಂಸ್ಥಾನದ ಪ್ರಜೆಗಳ ಕ್ಷೇಮಾರ್ಥವಾಗಿ ನಾನು ವಿದ್ಯಾಭ್ಯಾಸವು ಕಡ್ಡಾಯವಾಗಿ ಎಲ್ಲರಿಗೂ ಮಾಡಲ್ಪಡುವಂತೆ ಕೆಲವು ಭಾಗಗಳಲ್ಲಿ ಏರ್ಪಾಡು ಮಾಡಿದೆನು. ಇದು ಬಹಳ ಪ್ರಯೋಜನಕಾರಿಯಾಗಿ ಪರಿಣಮಿಸಿತು. ಈಗ ನನ್ನ ಸಂಸ್ಥಾನದಲ್ಲೆಲ್ಲಾ ವಿದ್ಯಾಭ್ಯಾಸವು ಉಚಿತವಾಗಿಯೂ, ಬಲಾತ್ಕಾರವಾಗಿಯೂ ಇರುವಂತೆ ಮಾಡಬೇಕೆಂದು ನಿಶ್ಚಯಿಸಿರುತ್ತೇನೆ. ಬರೆಯುವುದೂ, ಓದುವುದೂ, ಲೆಕ್ಕಾಚಾರ, ಇವುಗಳ ಸಂಬಂಧಪಟ್ಟ ವಿದ್ಯಾಭ್ಯಾಸವು ಉಚಿತವಾಗಿಯೂ, ಬಲಾತ್ಕಾರವಾಗಿಯೂ ಇರಬೇಕು. ನಾನು ಅಮೇರಿಕಾ ಮತ್ತು ಯೂರೋಪ್‌ಖಂಡಗಳಲ್ಲಿ ಸಂಚಾರ ಮಾಡಿದಾಗ ಕೈಗಾರಿಕೆಯ ವಿದ್ಯಾಭ್ಯಾಸದ ಮಹಿಮೆಯು ಗೊತ್ತಾಯಿತು. ಆ ದೇಶದಲ್ಲಿ ಎಲ್ಲಾ ವೃತ್ತಿಗಳಿಗಿಂತಲೂ ಕೈಗಾರಿಕೆಯಿಂದ ಬದುಕತಕ್ಕ ವೃತ್ತಿಯೇ ಅತ್ಯಧಿಕವಾಗಿರುತ್ತದೆ. ಸರಕಾರದ ಉದ್ಯೋಗಗಳಿಗೂ ಕೋಟ್ಯಾ ಜನಗಳು ಸಿಕ್ಕುವುದಿಲ್ಲ. ಕೈಗಾರಿಕೆಗಳ ಸಹಾಯದಿಂದ ಸ್ವತಂತ್ರವಾದ ಜೀವನವನ್ನು ಕೈಕೊಂಡು ಪ್ರತಿಯೊಬ್ಬರೂ ಸುಖವಾಗಿಯೂ, ಗೌರವವಾಗಿಯೂ ಇರುವರು. ವಿದ್ಯಾಭ್ಯಾಸಕ್ರಮವು ಪಾಶ್ಚಾತ್ಯರಲ್ಲಿ ಬಹಳವಾಗಿ ಬದಲಾಯಿಸಿದೆ. ಪಾಶ್ಚಾತ್ಯರಲ್ಲಿ ಪ್ರಸಿದ್ಧರಾದವರೆಲ್ಲರೂ ಲೌಕಿಕವಿದ್ಯಾಭ್ಯಾಸವನ್ನು ಚೆನ್ನಾಗಿ ಮಾಡಿ ಕೈಗಾರಿಕೆಗಳಲ್ಲಿ ಅಸಮಾನವಾದ ಶಕ್ತಿಯುಳ್ಳವರಾಗಿರುತ್ತಾರೆ. ಈ ದೇಶದಲ್ಲಿ ಅನುಪಪನ್ನತೆ ಎಂಬುವುದೇ ಬಹಳ ಅಪೂರ್ವ: ಇದಕ್ಕೆ ಮುಖ್ಯಕಾರಣವು ನಾನಾವಿಧವಾದ ಕೈಗಾರಿಕೆಗಳ ಅವಲಂಬನೆಯಾಗಿರುವದು: ಕೈಗಾರಿಕೆಗೆ ಮುಖ್ಯಸ್ಥಾನವಾದದ್ದು ಅಮೇರಿಕಾಖಂಡ ಮಾತ್ರವೇ ಅಲ್ಲ. ಅಮೇರಿಕಾಖಂಡಕ್ಕಿಂತಲೂ ಜರ್ಮನೀದೇಶವು ಸಕಲಕಲಾ ಕೌಶಲ್ಯಗಳಿಗೆ ಜನ್ಮಸ್ಥಾನವಾಗಿರುವುದು. ಜರ್ಮನೀದೇಶದ ರಾಜಧಾನಿಯಾದ ಬರ್ಲಿನ್ ಪಟ್ಟಣದೊಳಗೆ ಒಂದು ಕೈಗಾರಿಕೆಯ ಹೈಸ್ಕೂಲ್ ಇರುವುದು. ಅಲ್ಲಿ ೧,೫೦೦ ಜನ ವಿದ್ಯಾರ್ಥಿಗಳು ಕೈಗಾರಿಕೆಗಳನ್ನು ಕಲಿಯುವರು. ಈ ಪಾಠಶಾಲೆಯಲ್ಲಿ ನಾನಾವಿಧವಾದ ಬಣ್ಣಗಳಲ್ಲಿ ಮಾಡತಕ್ಕ ಕೆಲಸ; ಹತ್ತೀ ಬಟ್ಟೆಗಳನ್ನೂ; ರೇಷ್ಮೇ ಬಟ್ಟೆಗಳನ್ನೂ ತೊಗಲಿನಲ್ಲಿ ಮಾಡತಕ್ಕ ಕೆಲಸ; ಇವುಗಳೆಲ್ಲಾ ಅತ್ಯುತ್ತಮವಾದ ಶಿಕ್ಷೆಯು ನಡೆಯುತ್ತಲಿರುವುದು. ಫ್ರಾನ್ಸ್ ದೇಶದಲ್ಲಿಯೂ ಇದೇರೀತಿ ಯಂತ್ರಗಳ ಸಹಾಯದಿಂದ ಅನೇಕ ಕೈಗಾರಿಕೆಗಳು ನಡೆಯುತ್ತಲಿರುವುವು. ಆಗಾಗ್ಯೆ ಹೊಸದಾಗಿ ತಯಾರಾಗತಕ್ಕ ವಸ್ತುಗಳ ಪ್ರದರ್ಶನವು ಮಾಡಲ್ಪಡುತ್ತಲಿರುವುದು. ಬಹಳ ಲಕ್ಷಣವಾಗಿ ಮಾರಿ ಪದಾರ್ಥಗಳನ್ನು ನಿರ್ಮಾಣ ಮಾಡತಕ್ಕವರಿಗೆ ಇಂಥಾ ಕೆಲಸಗಳಲ್ಲಿ ಬರತಕ್ಕ ದ್ರವ್ಯಸಹಾಯದಿಂದಲೇ ಜೀವನವೂ ಕೂಡ ನಡೆಯುವುದು. ಈ ವಿಷಯದಲ್ಲಿ ಆಸ್ಟ್ರಿಯಾ ದೇಶವು ಜರ್ಮನೀ ಮತ್ತು ಫ್ರಾನ್ಸ್ ದೇಶಕ್ಕೆ ಕಡಿಮೆಯಾಗಿಲ್ಲ. ವಿಯನ್ನಾ ಮೊದಲಾದ ಪಟ್ಟಣಗಳಲ್ಲಿ ಅನೇಕ ಕೈಗಾರಿಕೆಗಳ ಪಾಠಶಾಲೆಗಳಿರುವುವು: ಇಟಲೀ ದೇಶದಲ್ಲಿ ಕಲೆಗಳ ಅಭ್ಯಾಸವು ಬಹಳ ಸಮರ್ಪಕವಾಗಿ ನಡೆಯುತ್ತಲಿರುವದು. ನೇಪಲ್ಸ್‌ಪಟ್ಟಣದಲ್ಲಿ ಇರತಕ್ಕ ಕೈಗಾರಿಕೆಯ ಪಾಠಶಾಲೆಗಳಲ್ಲಿ ಪ್ರಪಂಚದಲ್ಲಿ ಲಾಭಕರವಾದ ಕೈಗಾರಿಕೆಗಳೆಷ್ಟಿರುವವೋ ಅವುಗಳನ್ನೆಲ್ಲಾ ಬೋಧಿಸುವದ

ಕ್ಕೆ ತಕ್ಕ ನಿರ್ಮಾಣವನ್ನು ಮಾಡಿರುವರು. ಈ ಕೈಗಾರಿಕೆಗಳಲ್ಲಿ ಸಮರ್ಥರಾದ ವಿದ್ವಾಂಸರು ಸೇರಿ ಕಲೆಗಳ ವಿಷಯದಲ್ಲಿ ಮಾಡತಕ್ಕ ಸಂಭಾಷಣೆಯನ್ನು ಕೇಳುವದೂಕೂಡ ಒಂದು ದೊಡ್ಡ ವಿದ್ಯಾಭ್ಯಾಸವಾಗಿ ಪರಿಣಮಿಸುವದು. ಲಂಡನ್ ಪಟ್ಟಣದಲ್ಲಿ ಅನೇಕ ಕೈಗಾರಿಕೆಯ ಪಾಠಶಾಲೆಗಳಿರುವವು. ಯಾವ ಕೈಗಾರಿಕೆಯನ್ನು ಕಲಿಯಬೇಕಾದರೂ ಅದಕ್ಕೆಲ್ಲಾ ಅವಕಾಶವು ಪಾಠಶಾಲೆಗಳಲ್ಲಿರುವದು ಮ್ಯಾಂಚೆಸ್ಟರ್, ಬರ್ಮಿಂಗ್‌ಹ್ಯಾಮ್, ಲೀಡ್ಸ್. ಎಂಬ ಪಟ್ಟಣಗಳಲ್ಲಿ ಸಕಲಕಲಾಶಾಲೆಗಳಿರುವವು. ಮ್ಯಾಂಚೆಸ್ಟರ್ ಪಟ್ಟದಲ್ಲಿ ಇರತಕ್ಕ ಕಲಾಶಾಲೆಯಲ್ಲಿ ಯಂತ್ರಗಳ ನಿರ್ಮಾಣ, ವಿದ್ಯುಚ್ಛಕ್ತಿಯ ಕೆಲಸಗಳು, ಎಂಜನಿಯರಿಂಗ್ ಶಾಸ್ತ್ರ, ಭೌತಿಕ ಶಾಸ್ತ್ರ, ವಸ್ತುಶಾಸ್ತ್ರ, ರಂಗನ್ನು ತೆಗೆಯತಕ್ಕ ಶಾಸ್ತ್ರ, ರಂಗನ್ನು ಹಾಕುವಶಾಸ್ತ್ರ ಬಟ್ಟೆ ಬರೆಗಳನ್ನೂ, ಕಾಗದವನ್ನೂ, ಲೋಹಗಳಿಂದ ಪದಾರ್ಥನಿರ್ಮಾಣವನ್ನೂ ಮಾಡುವ ಶಾಸ್ತ್ರ, ಇವುಗಳೆಲ್ಲಾ ಕಲಿಸಲ್ಪಡುತ್ತಲಿರುವವು. ಈ ಶಾಸ್ತ್ರಗಳನ್ನು ಕಲಿಯುವದಕ್ಕೆ ಬರೋಡಾದೇಶದಿಂದ ಕೆಲವುಜನ ವಿದ್ಯಾರ್ಥಿಗಳನ್ನು ಕಳುಹಿಸಿರುತ್ತೇನೆ.

ನಾವು ನೋಡಿದ ದೇಶಗಳಲ್ಲೆಲ್ಲಾ ಕೈಗಾರಿಕೆಯು ವಿಶೇಷವಾಗಿ ನಡೆಯುವದು ಅಮೇರಿಕಾಖಂಡದ ಸಂಯುಕ್ತಸಂಸ್ಥಾನಗಳಾಗಿರುತ್ತವೆ. ಇದರಲ್ಲಿ ಪ್ರತಿಯೊಂದು ಸಂಸ್ಥಾನದಲ್ಲಿಯೂ ಒಂದೊಂದು ಕೈಗಾರಿಕೆಯ ಕಾಲೇಜು ಇರುವದು. ಈ ಕಾಲೇಜುಗಳಲ್ಲಿ ಫೀಜನ್ನು ವಸೂಲ್ಮಾಡದೇ ಪ್ರೌಢಪಾಠವನ್ನೂ ಕೂಡ ಹೇಳುವರು. ಪ್ರಜೆಗಳೆಲ್ಲರೂ ಅವರವರ ಸ್ವಶಕ್ತಿಯಿಂದ ಭೋಗ್ಯವಸ್ತುಗಳನ್ನು ನಿರ್ಮಾಣಮಾಡಿ ಆತ್ಮಾವಲಂಬನೆಯಿಂದ ಜೀವಿಸುವದು ಪ್ರಜೆಗಳಿಗೆ ಮಾತ್ರವೇ ಅಲ್ಲದೆ ಜನಗಳಿಗೂ ಕ್ಷೇಮಕರವಾದದ್ದರಿಂದ ಇಂಥಾ ಕೆಲಸವನ್ನು ಸರಕಾರದವರು ಚಟುಪಟಿಕೆಯಿಂದ ಮಾಡಿಸಬೇಕೇಹೊರತೂ ಇಂಥಾ ವಿದ್ಯಾಭ್ಯಾಸಕ್ಕೋಸ್ಕರ ಫೀಜನ್ನು ವಸೂಲ್‌ಮಾಡುವದು ತಪ್ಪೆಂದು ಆದೇಶೀಯರು ಅಭಿಪ್ರಾಯಪಡುತ್ತಾರೆ.

ಈ ಕಾಲೇಜುಗಳೆಲ್ಲಾ ಸರಕಾರದ ಕಾಲೇಜುಗಳು. ಇವುಗಳಲ್ಲದೆ ಧರ್ಮಿಷ್ಠರಾದವರಿಂದ ಪ್ರತಿಷ್ಠಿಸಲ್ಪಟ್ಟ ಕೆಲವು ಕಾಲೇಜುಗಳಿರುತ್ತವೆ ಈಕಾಲೇಜುಗಳಲ್ಲಿ ಸಿವಿಲ್ ಯಂಜನಿಯರಿಂಗ್, ವಿದ್ಯುಚ್ಛಕ್ತಿಯ ಎಂಜನಿರಿಂಗ್, ಯಂತ್ರಗಳ ಎಂಜನಿಯರಿಂಗ್, ನಾವೆಗಳ ಎಂಜನಿಯರಿಂಗ್, ಪಟ್ಟಣಗಳನ್ನು ಕಟ್ಟುವುದು, ಚಿತ್ರಬರೆಯುವುದು, ಪ್ರತಿಮೆಗಳನ್ನು ಮಾಡುವದು, ನೇಗೆಯ ಕೆಲಸ, ಇವೇ ಮೊದಲಾದವುಗಳೆಲ್ಲಾ ಕಲಿಸಲ್ಪಡುತ್ತವೆ. ಬಾಸ್ಟನ್ ಪಟ್ಟಣದಲ್ಲಿ ಒಂದು ಸಕಲಕಲಾಶಾಲೆ ಇರುವದು. ಇಲ್ಲಿ ೨,೫೦೦ ಜನ ವಿದ್ಯಾರ್ಥಿಗಳು ವ್ಯಾಸಂಗಮಾಡುವರು. ಚಿಕಾಗೋಪಟ್ಟಣದಲ್ಲಿ ಒಂದು ಕಲಾಶಾಲೆ ಇರುವದು. ನ್ಯೂಯಾರ್ಕ್‌ಪಟ್ಟಣದಲ್ಲಿ ಒಂದು ಕಲಾಶಾಲೆಯಿರುವದು.ಅಲ್ಲಿ ೧,೫೦೦ ಜನ ವಿದ್ಯಾರ್ಥಿಗಳು ವ್ಯಾಸಂಗಮಾಡುವರು. ಇವುಗಳೆಲ್ಲಾ ಧರ್ಮಿಷ್ಟರಾದ ಮಹಾಜನಗಳಿಂದ ಪ್ರತಿಷ್ಠಿಸಲ್ಪಟ್ಟ ಕಲಾಶಾಲೆಗಳಾಗಿರುತ್ತವೆ. ಹಾರ್ವರ್ಡ್, ಏಲ್, ಮತ್ತು ಕೊಲಂಬಿಯಾ ಪಟ್ಟಣಗಳಲ್ಲಿ ಎಂಜನಿಯರಿಂಗ್ ಶಾಸ್ತ್ರವು ಸಮಗ್ರವಾಗಿ ಬೋಧಿಸಲ್ಪಡುತ್ತಲಿರುವುದು.ಇಲ್ಲಿನ ಹೈಸ್ಕೂಲುಗಳಲ್ಲೆಲ್ಲಾ ಬಡಗೀ ಕೆಲಸ, ಕಬ್ಬಿಣಕೆಲಸ, ಯಂತ್ರಗಳನ್ನು ಮಾಡತಕ್ಕ ಕೆಲಸ,ಇವೆಲ್ಲಾ

ಸಮಗ್ರವಾಗಿ ಕಲಿಸಲ್ಪಡುತ್ತಲಿರುವವು. ನಾನು ಇನ್ನೂ ಜರ್ಮನ್ ದೇಶಕ್ಕೆ ಹೋಗಿಲ್ಲ. ಆದರೆ ಕಳೆದ ಮೂವತ್ತು ನಲವತ್ತು ವರುಷಗಳಲ್ಲಿ ಜರ್ಮನ್‌ದೇಶೀಯರು ಮಾಡಿರತಕ್ಕ ಅದ್ಭುತವಾದ ಕೆಲಸಗಳನ್ನೆಲ್ಲಾ ನಾವು ಬಲ್ಲೆವು. ಈ ಪ್ರಪಂಚದಲ್ಲಿ ಇರತಕ್ಕ ಜನಗಳೆಲ್ಲಾ ಇವರು ಅದ್ಭುತವಾದ ಸಾಮರ್ಥ್ಯವುಳ್ಳವರೆಂದು ರಣರಂಗದಲ್ಲಿ ಇವರು ಹೊಂದಿದ ಜಯಗಳಿಂದಲೇ ಪ್ರದರ್ಶನವಾಗುವದು. ವ್ಯಾಪಾರ, ಮ್ಯಾನುಫ್ಯಾಕ್ಚರ್‌ಗಳಲ್ಲಿ ಇವರು ಹೊಂದಿದ ಜಯವು ಈ ಪ್ರಪಂಚದಲ್ಲಿಯೇ ಅಭೂತಪೂರ್ವವಾದದ್ದು. ಆದರೆ ಕಲಾಕೌಶಲ್ಯದಲ್ಲಿ ಇವರು ಹೊಂದಿರತಕ್ಕ ಜಯಗಳೊಡನೆ ಈ ಜಯಗಳನ್ನು ಹೋಲಿಸಿದರೆ ಅವುಗಳು ಏಕದೇಶವಾಗಿವೆ.

ಇದಲ್ಲದೆ ಚಿಕ್ಕವಯಸ್ಸಿನಲ್ಲಿಯೇ ಮಕ್ಕಳ ಕೈಗಳಿಗೂ ಮತ್ತು ಕಣ್ಣುಗಳಿಗೂ ಕಲೆಗಳಲ್ಲಿ ಅಭ್ಯಾಸವನ್ನು ಮಾಡುವದು ಬಹಳ ಅವಶ್ಯಕವಾದದ್ದು. ಈ ಅಭ್ಯಾಸದ ಮಹಿಮೆಯನ್ನು ಹೇಳುವದುಕಷ್ಟ. ಕೈಗಾರಿಕೆಯಿಂದ ಜೀವನಮಾಡತಕ್ಕವರು, ಚಿಕ್ಕ ವಯಸ್ಸಿನಲ್ಲಿಯೇ ತಾವು ಯಾವಕೈಗಾರಿಕೆಯಿಂದ ಜೀವನಮಾಡಬೇಕೆಂದಿರುತ್ತಾರೋ ಅದನ್ನು ಅವರು ಅಭ್ಯಾಸಮಾಡಿದರೆ ಕೆಲವುವರುಷಗಳೊಳಗಾಗಿಯೇ ಅಂಥಾ ಕೈಗಾರಿಕೆಗಳನ್ನು ಬಹಳ ಲಕ್ಷಣವಾಗಿ ಮಾಡತಕ್ಕ ಶಕ್ತಿಯು ಬರುವದು. ಅಪೂರ್ವ ಕೈಗಾರಿಕೆಯಿಂದ ಜೀವಿಸುವದು ಅವರಿಗೆ ಅವಶ್ಯಕವಿಲ್ಲವೋ ಅಂಥಾವರೂಕೂಡ ಬಾಲ್ಯದಲ್ಲಿ ಕೈಗಳಿಗೂ ಕಣ್ಣುಗಳಿಗೂ ಮಾಡಬೇಕಾದ ಕೆಲಸಗಳಲ್ಲಿ ಅಭ್ಯಾಸವನ್ನು ಮಾಡಿಸಬೇಕು. ಚಿತ್ರಗಳನ್ನು ಬರೆಯುವದು, ಪ್ರತಿಮೆಗಳನ್ನು ಮಾಡುವದು, ಮರಗೆಲಸ, ಲೋಹಗಳಕೆಲಸ, ಇವುಗಳೆಲ್ಲಾ ಎಲ್ಲಾ ಪದವಿಯಲ್ಲಿರತಕ್ಕ ವಿದ್ಯಾರ್ಥಿಗಳಿಗೂ ಉಪಯುಕ್ತವಾದದ್ದು. ಶಾರೀರಕಶಾಸ್ತ್ರಜ್ಞರೂ ಬುದ್ಧಿಶಾಸ್ತ್ರಜ್ಞರೂ ಇಂಥಾವ್ಯಾಸಂಗವನ್ನು ಮಾಡಿಸುವವಿಷಯದಲ್ಲಿ ಬಾಲ್ಯದಲ್ಲಿಯೇ ನಾವು ಸರಿಯಾದ ಶಿಕ್ಷೆಯನ್ನು ಮಾಡದೇಇದ್ದರೆ ವಯಸ್ಸಾದಮೇಲೆ ಈ ಎರಡು ಅಂಗಗಳಿಂದಲೂ ಮಾಡಬೇಕಾದಕೆಲಸಗಳು ಲಕ್ಷಣವಾಗಿ ಮಾಡುವದಕ್ಕಾಗುವದಿಲ್ಲವೆಂದು ಹೇಳುತಾರೆ. ಇದು ವಾಸ್ತವವಾದದ್ದು. ವಿದ್ಯಾಭ್ಯಾಸ ಮತ್ತು ಕೈಗಾರಿಕೆಗಳನ್ನು ಮಾಡುವ ಹುಡುಗರೂ ಮತ್ತು ಹುಡುಗಿಯರೂ ಕೈಯಿಂದ ಕೆಲಸಮಾಡುವದನ್ನೂ, ಕಣ್ಣಿನಿಂದ ವ್ಯತ್ಯಾಸಗಳನ್ನು ತಿಳಿದುಕೊಳ್ಳುವಶಕ್ತಿಯನ್ನೂ ಬಾಲ್ಯದಲ್ಲಿಯೇ ಆರ್ಜಿಸಬೇಕು. ನಾವು ಶಾಲೆಗಳಿಗೆಲ್ಲಾ ಒಂದು ಕೈಗಾರಿಕೆಯ ತರಗತಿಯನ್ನು ಸೇರಿಸುವದು ಬಹಳ ಅವಶ್ಯಕ. ಬಹಳ ಉಪಯುಕ್ತವಾದ ವಸ್ತುಗಳನ್ನು ನಿರ್ಮಾಣಮಾಡುವಕೆಲಸಗಳು ವಿಶೇಷವಾಗಿರುತ್ತವೆ. ಅವುಗಳನ್ನು ಹೇಗೆಮಾಡಬೇಕೋ ಅದನ್ನು ಕಲಿಯುವದು ಬಡವರಿಗೆ ಜೀವನೋಪಾಯವಾಗಿಯೂ ಐಶ್ವರ್ಯವಂತರಿಗೆ ಸಂತೋಷಜನಕವಾಗಿಯೂ ಪರಿಣಮಿಸುವದು. ಆದುದರಿಂದ ಯಾವ ಅಂತಸ್ತುಗಳಲ್ಲಿದ್ದಾಗ್ಯೂ ಎಲ್ಲರೂ ಈ ಕೆಲಸವನ್ನು ಮಾಡಬಹುದು. ನಮ್ಮ ದೇಶದ ಕೈಗಾರಿಕೆಗಳು ವೃದ್ಧಿಗೆ ಬರಬೇಕಾದರೆ ಎಲ್ಲಾ ಕೈಗಾರಿಕೆಗಳಲ್ಲಿಯೂ ಸರಿಯಾದಪ್ರವೇಶವನ್ನು ಬಾಲ್ಯದಲ್ಲಿ ಎಲ್ಲರೂಹೊಂದಬೇಕು. ಇಂಥಾ ಉಪಯುಕ್ತವಾದಕಲೆಗಳಲ್ಲಿ ಅಭ್ಯಾಸವನ್ನು ಮಾಡುವದು ಅತ್ಯಂತ ಅವಶ್ಯಕವಾದಾಗ್ಯೂ ಈ ಕಲೆಗಳಲ್ಲಿ ಅಭ್ಯಾಸಕ್ಕೆ ಆಧಾರಭೂತವಾದ ಲೋಕವ್ಯವಹಾರಕ್ಕೆ ಸಾಧಕವಾದ ಬೌದ್ಧವಿದ್ಯಾಭ್ಯಾಸವನ್ನೂ ಕೂಡಾ ನಾವು ಉಪೇಕ್ಷಿಸಬಾರದು.

ಇಂಡಿಯಾದೇಶದ ಸಮಸ್ತ ಪಟ್ಟಣಗಳಲ್ಲಿಯೂ ಸಮಸ್ತ ಗ್ರಾಮಗಳಲ್ಲಿಯೂ ಕೈಗಾರಿಕೆಯ ಪಾಠಶಾಲೆಗಳು ಪ್ರತಿಷ್ಠಿಸಲ್ಪಡಬೇಕು. ಈ ಕೈಗಾರಿಕೆಗಳನ್ನು ಯಂತ್ರಸಹಾಯಗಳಿಂದ ಮಾಡುವ ರೀತಿಯೂ ಅಭ್ಯಾಸಮಾಡಲ್ಪಡಬೇಕು. ಈ ಅಭ್ಯಾಸವಾಗಬೇಕಾದರೆ ಯಾವ ಯಾವ ದೇಶಗಳಲ್ಲಿ ಯಂತ್ರಗಳು ಮಾಡಲ್ಪಡುವವೋ ಅಲ್ಲಿಗೆ ವಿದ್ಯಾರ್ಥಿಗಳು ಹೋಗಿ ಯಂತ್ರರಚನೆಯನ್ನು ಕಲಿತುಕೊಳ್ಳಬೇಕು. ಈ ರಚನಾಕೌಶಲ್ಯವು ಉಂಟಾಗಬೇಕಾದರೆ, ಯುರೋಪ್, ಅಮೆರಿಕಾ, ಜಪಾನ್, ದೇಶಗಳಿಗೆ ಪ್ರಯಾಣಮಾಡುವದು ಅವಶ್ಯಕ. ಇಂಥಾ ಪ್ರಯಾಣದ ವಿಷಯದಲ್ಲಿ ದುರಭಿಮಾನಿಗಳು ಪ್ರತಿಬಂಧಕವಾಗುವದಕ್ಕೆ ಅವಕಾಶ ಕೊಡಬಾರದು. ಲೋಕದಲ್ಲಿ ಸರ್ವಜ್ಞರು ಯಾರೂ ಇಲ್ಲ. ನಮ್ಮ ದೇಶೀಯರಿಗೆ ಕೆಲವು ವಿಷಯಗಳಲ್ಲಿ ಹೆಚ್ಚು ತಿಳುವಳಿಕೆಯು ಇದ್ದರೆ ದೇಶಾಂತರದವರಿಗೆ ಬೇರೇ ಕೆಲವು ವಿಷಯಗಳಲ್ಲಿ ಹೆಚ್ಚು ತಿಳುವಳಿಕೆಯು ಇರುವುದು. ದೇಶಾಂತರದವರು ದುರಭಿಮಾನವನ್ನು ಬಿಟ್ಟು ನಮ್ಮಲ್ಲಿರತಕ್ಕ ಗುಣಾಂಶಗಳನ್ನು ಪರಿಗ್ರಹಿಸುವರು. ಅವರಲ್ಲಿರತಕ್ಕ ಗುಣಾಂಶಗಳನ್ನು ತಿಳಿದುಕೊಂಡು ಅದರಿಂದ ಪ್ರಯೋಜನವನ್ನು ಹೊಂದುವುದು ನಮಗೆ ಕರ್ತವ್ಯವಲ್ಲವೇ? ಯಂತ್ರರಚನಾಶಕ್ತಿಯಲ್ಲಿಯೂ, ನಾನಾ ವಿಧವಾದ ಕೈಗಾರಿಕೆಗಳಲ್ಲಿಯೂ ನಮಗಿಂತಲೂ ಅಧಿಕರಾದವರಿಂದ ನಾವು ಏತಕ್ಕೆ ತಿಳಿದುಕೊಳ್ಳಬಾರದು? ಹಾಗೆ ತಿಳಿದುಕೊಳ್ಳುವುದಕ್ಕೋಸ್ಕರ ದೇಶಾಟನವನ್ನು ಏತಕ್ಕೆ ಮಾಡಬಾರದು? ಕಳೆದ ೫೦ ವರುಷಗಳಿಂದಲೂ ಇಂಥಾ ದೇಶಾಟನಕ್ಕೆ ಎಷ್ಟು ಅಡ್ಡಿಯನ್ನು ಮಾಡಿದಾಗ್ಯೂ ಅದನ್ನು ಲಕ್ಷ್ಯಮಾಡದೆ ದೇಶಾಟನವನ್ನು ಮಾಡಿ ಅನೇಕರು ಅನೇಕ ಕೈಗಾರಿಕೆಗಳಲ್ಲಿ ಪ್ರವೇಶವನ್ನು ಹೊಂದುತ್ತಲಿರುವರು. ದುರಭಿಮಾನಜನ್ಯವಾದ ನಿರ್ಬಂಧಗಳು ಪರಿಹರಿಸಲ್ಪಟ್ಟರೆ ಇನ್ನೂ ಬಹುಮಂದಿಗಳು ದೇಶಾಂತರಗಳಿಗೆ ಪ್ರಯಾಣಮಾಡಿ ಯಾವ ಯಾವ ವಿದ್ಯೆಯನ್ನು ಕಲಿತುಕೊಂಡು ಬಂದು ತಮ್ಮ ದೇಶದಲ್ಲಿ ಪ್ರಚಾರಮಾಡಿ ದೇಶವನ್ನು ವೃದ್ಧಿಗೆ ತರಬಹುದೋ ಅದನ್ನು ಮಾಡುವರು. ಅದಕ್ಕೆ ಇಂಥಾ ದೇಶಾಭಿಮಾನದ ಅನುಷ್ಠಾನಕ್ಕೆ ಪ್ರತಿಬಂಧಕವನ್ನುಂಟುಮಾಡುವದು ಬಹಳ ಪಾಪಕರವಾದ ಕೆಲಸವು. ಆದರೆ ಈ ದುರಭಿಮಾನವು ಗತಗೋಷ್ಠಿಗೆ ಸೇರಿತೆಂಬುವುದಕ್ಕೆ ದೃಷ್ಟಾಂತಗಳು ಬೇಕಾದ ಹಾಗೆ ಇರುತ್ತವೆ. ನಾನು ಸಂಚಾರಮಾಡಿದ ದೇಶಗಳಲ್ಲಿನ ವಿಶೇಷ ವಿಷಯಗಳನ್ನು ತಿಳಿದುಕೊಳ್ಳುವದಕ್ಕೆ ಜನರು ಅತ್ಯಂತ ಅಭಿಲಾಷೆಯುಳ್ಳವರಾಗಿರುತ್ತಾರೆ. ಈ ವಿಚಾರವೇ ಉಪಯುಕ್ತವಾದ ಜ್ಞಾನವಿಷಯದಲ್ಲಿ ಹುಟ್ಟಿರತಕ್ಕ ದಾಹವನ್ನು ಸೂಚಿಸುತ್ತದೆ. ಈ ದಾಹವು ನಿಜವಾದದ್ದು. ಇದು ಶುಭಸೂಚಕವಾದದ್ದಾಗಿಯೂ ಇರುವದು. ಅಮೆರಿಕಾಖಂಡದವರು ಕೈಗಾರಿಕೆಗಳಲ್ಲಿ ಬಹಳ ಪ್ರಜ್ಞಾಶಾಲಿಗಳು,

ದಾಗ್ಯೂ ಪ್ರತಿವರುಷವೂ ಮೂರುಸಾವಿರ ಜನ ವಿದ್ಯಾರ್ಥಿಗಳನ್ನು ಬೇರೆ ಬೇರೆ ದೇಶಾಂತರಗಳಿಗೆ ಕಳುಹಿಸಿ ಯಾವ ಕೈಗಾರಿಕೆಯಲ್ಲಿ ಯಾವ ದೇಶೀಯರು ತಮಗಿಂತಲೂ ಚನ್ನಾಗಿ ಕೈಗಾರಿಕೆಗಳನ್ನು ಮಾಡುವರೋ ಅದನ್ನು ಪರೀಕ್ಷಿಸಿ ಅಭ್ಯಾಸ ಮಾಡಿಕೊಂಡು ಬರುವಂತೆ ಆಜ್ಞಾಪಿಸಿ ಕಳುಹಿಸಿ ಕೊಡುತ್ತಾರೆ. ಯಾವ ಯಾವ ದೇಶಗಳಲ್ಲಿ ಯಾವ ಯಾವ ಪದಾರ್ಥಗಳು ಬೆಳೆಯುವವೋ ಅವುಗಳನ್ನು ಪರಿಶೀಲಿಸಿ ವ್ಯಾಪಾರಕ್ಕೆ ತಕ್ಕ ಪ್ರೋತ್ಸಾಹವನ್ನುಂಟುಮಾಡುವದಕ್ಕೂ ಜನಗಳನ್ನು ಕಳುಹಿಸುತ್ತಲಿರುವರು. ಜಪಾನ್ ದೇಶೀಯರು ಕೈಗಾರಿಕೆಗಳಲ್ಲಿ ಸಮಗ್ರವಾದ ಪಾಂಡಿತ್ಯವುಳ್ಳವರಾದಾಗ್ಯೂ, ಯಂತ್ರಗಳಿಂದ ತಯಾರಾದ ವಸ್ತುಗಳನ್ನು ಪಾಶ್ಚಾತ್ಯರು ಮಾರುವ ಖರೀದಿಗಿಂತಲೂ ಕಡಿಮೆಯಾಗಿ ಮಾರಬೇಕಾದರೆ ಎಷ್ಟು ನೈಪುಣ್ಯವನ್ನು ಹೊಂದಿರಬೇಕೋ ಅಷ್ಟು ನೈಪುಣ್ಯವನ್ನು ಹೊಂದಿದ್ದಾಗ್ಯೂ, ಸಾವಿರಾರು ಜನ ವಿದ್ಯಾರ್ಥಿಗಳನ್ನು ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್, ಅಮೇರಿಕಾ ದೇಶಗಳಿಗೆ ಕಳುಹಿಸಿ ಇರುವರು. ಅಲ್ಲಿನ ಕೆಲಸಗಳ ಮರ್ಮಗಳನ್ನು ತಿಳಿದುಕೊಂಡು ಅವರಿಗಿಂತಲೂ ಚನ್ನಾಗಿ ಕೆಲಸಮಾಡಿ ಅವರನ್ನು ಮೂಲೆಗೆ ಕೂರಿಸುವ ಪ್ರಯತ್ನವನ್ನು ಮಾಡುತ್ತಿರುವರು. ಜ್ಞಾನಾರ್ಜನೆಯ ದಾಹವು ನಾಗರೀಕರಲ್ಲಿ ಇಷ್ಟು ಪ್ರಬಲವಾಗಿರುವದು. ಸಮಸ್ತ ಕೈಗಾರಿಕೆಗಳೂ ಸರ್ವರಿಗೂ ಅವಲಂಬನೀಯಗಳೆಂದು ಭಾವಿಸಿ ಕೆಲಸ ಮಾಡುತ್ತಲಿರುವರು. ಹೀಗೆ ಕೆಲಸಮಾಡುವವರಲ್ಲಿ ದಾರಿದ್ರ್ಯವು ಹುಡಿಕಿ ನೋಡಿದರೂ ಸಿಕ್ಕುವದಿಲ್ಲ. ಜಪಾನ್‌ಗವರ್ನಮೆಂಟಿನವರುಅಲ್ಲಿನ ವಿದ್ಯಾರ್ಥಿಗಳನ್ನು ಯೂರೋಪ್‌ಖಂಡಕ್ಕೆ ವಿದ್ಯಾಭ್ಯಾಸಾರ್ಥವಾಗಿಕಳುಹಿಸುತ್ತಲಿರುವರು. ಹೀಗೆ ದೇಶಾಟನವನ್ನು ಮಾಡಿ ಸಕಲವಿದ್ಯಾವಿಶಾರದರಾಗಿ ಜಪಾನ್ ದೇಶಕ್ಕೆ ವಾಪಸು ಬಂದ ಮಹನೀಯರ ಪ್ರಭಾವದಿಂದ ರಾಜಕೀಯ ವಿಷಯಗಳಲ್ಲಿಯೂ, ಕೈಗಾರಿಕೇ ವಿಷಯದಲ್ಲಿಯೂ, ವ್ಯಾಪಾರದ ವಿಷಯದಲ್ಲಿಯೂ, ಈಗ ಪ್ರಪಂಚದಲ್ಲಿ ಜಪಾನ್ ದೇಶವು ಅಗ್ರಗಣ್ಯವಾದ ಪದವಿಯನ್ನು ಅನುಭವಿಸುತ್ತಿರುವದು. ಜಪಾನ್ ದೇಶದ ನಾವಿಕರು ವಿಲಾಯಿತಿಯಲ್ಲಿ ನಾವೆಗಳ ಶಾಸ್ತ್ರವನ್ನು ಅಭ್ಯಾಸಮಾಡಿದ್ದಲ್ಲದೆ, ಅಮೇರಿಕಾ ಮೊದಲಾದ ನಾವೆಗಳಿಗೆ ಪ್ರಸಿದ್ಧವಾದ ಎಲ್ಲಾ ದೇಶಗಳಲ್ಲಿಯೂ ಶಿಕ್ಷೆಯನ್ನು ಹೊಂದಿ ಈಗ ಅಖಂಡವಾದ ಪಾಂಡಿತ್ಯವನ್ನು ಹೊಂದಿರುವರು. ಮಿಲಿಟರೀ ವಿದ್ಯೆಗಳನ್ನು ಜರ್ಮನೀ ಮೊದಲಾದ ಸ್ಥಳಗಳಲ್ಲಿ ಅಭ್ಯಾಸಮಾಡಿ ಮಿಲಿಟರೀ ಚಮತ್ಕಾರಗಳಲ್ಲಿ ಅದ್ವಿತೀಯರಾಗಿರುವರು. ಲಂಡನ್, ಬರ್ಲಿನ್, ನ್ಯೂಯಾರ್ಕ್ ಮೊದಲಾದ ಪಟ್ಟಣಗಳಲ್ಲಿ ಕುಬೇರ ಪದವಿಯನ್ನು ಅಲಂಕರಿಸುತ್ತಿರುವ ಬ್ಯಾಂಕುರುಗಳಲ್ಲಿ ಧನಾರ್ಜನೆಯ ಮತ್ತು ಧನವ್ಯಯದ ಮರ್ಮಗಳನ್ನು ತಿಳಿದುಕೊಂಡು ಲೆಖ್ಖಾಚಾರಸ್ಥರಾದ ವರ್ತಕಮಹಾಜನರ ಮೆಹನತ್ತಿನಿಂದ ಜಪಾನ್ ದೇಶವು ಸಂಪತ್ತಿಗೆ ಮಾತೃಸ್ಥಾ

ನವಾಗಿರುವದು. ದೇಹಾಂತವಾಗಿ ಸಮಸ್ತವನ್ನೂ ಪರಿತ್ಯಾಗಮಾಡುವ, ಧರ್ಮವನ್ನು ಅವಲಂಬಿಸಿರುವ ಜಪಾನ್ ದೇಶೀಯರು ಈ ಪ್ರಪಂಚದಲ್ಲಿರುವ ಸಮಸ್ತ ಜನಗಳಿಗಿಂತಲೂ ಮುಂದಾಳುಗಳಾಗಿರುವರು.

ಪ್ರಪಂಚವೆಲ್ಲಾ ಈ ರೀತಿಯಲ್ಲಿ ನಾನು ಮುಂದು, ತಾನು ಮುಂದು ಎಂಬದಾಗಿ ದೇಶವನ್ನು ವೃದ್ಧಿಗೆ ತರುವ ಏರ್ಪಾಡನ್ನು ಮಾಡುತ್ತಲಿರುವದು ಅತ್ಯಾವಶ್ಯಕ. ನಮ್ಮ ದೇಶೀಯರಲ್ಲಿ ಧರ್ಮಿಷ್ಟರಾದ ಮ॥ಯೋಗೇಂದ್ರಚಂದ್ರಘೋಸ್‌ರವರು ಅಮೇರಿಕಾ ಮತ್ತು ಯೂರೋಪ್‌ಖಂಡಗಳಿಗೆ ವಿದ್ಯಾಭ್ಯಾಸಾರ್ಥವಾಗಿ ವಿದ್ಯಾರ್ಥಿಗಳನ್ನು ಕಳುಹಿಸುವ ಏರ್ಪಾಡನ್ನು ಮಾಡಿ ಅನೇಕ ಜನ ವಿದ್ಯಾರ್ಥಿಗಳನ್ನು ಕಳುಹಿಸಿ ಇರುವರು. ಇದನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ಯೂರೋಪ್, ಅಮೇರಿಕಾ ಖಂಡಗಳಲ್ಲಿ ನಾನು ಸಂಚಾರ ಮಾಡುತ್ತಿರುವಾಗ್ಗೆ ಯೆಲ್ಲೆಲ್ಲಿಯೂ ಬಂಗಾಳೀ ವಿದ್ಯಾರ್ಥಿಗಳು ವಿದ್ಯಾಭ್ಯಾಸಮಾಡುತ್ತಿರುವದನ್ನು ನೋಡಿ ನನಗೆ ಅಪರಿಮಿತವಾದ ಸಂತೋಷ ಉಂಟಾಯಿತು. ಇಂಡಿಯಾದೇಶದಿಂದ ಅವರು ಬಹಳ ದೂರದಲ್ಲಿದ್ದಾಗ್ಯೂ ತಮ್ಮ ದೇಶದ ಅಭಿವೃದ್ಧಿಯ ವಿಷಯದಲ್ಲಿ ಅವರಿಗೆ ಇರುವ ಅಭಿಮಾನವು ಅನನ್ಯಸಾಧಾರಣವಾಗಿರುವದು. ಇಂಡಿಯಾದೇಶದ ಏಳಿಗೆಗೆ ಈ ವಿದ್ಯಾರ್ಥಿಗಳೇ ಕಾರಣಭೂತರು. ಬರೋಡಾ ದೇಶದಿಂದಲೂ ಕಳೆದ ಕೆಲವು ವರುಷಗಳಿಂದ ದೇಶಾಂತರಗಳಿಗೆ ವಿದ್ಯಾಭ್ಯಾಸಾರ್ಥವಾಗಿ ಅನೇಕ ವಿದ್ಯಾರ್ಥಿಗಳು ಕಳುಹಿಸಲ್ಪಟ್ಟರು. ಅವರು ಈಗ ಬಹಳ ಪ್ರಯೋಜನವಾದ ಕೆಲಸಗಳನ್ನು ಮಾಡಿ ತಾವು ಜೀವಿಕೆಯನ್ನು ಸಂಪಾದಿಸಿಕೊಳ್ಳುವದಲ್ಲದೆ ಬಹು ಜನಗಳಿಗೆ ಜೀವಿಕೆಯನ್ನು ಕಲ್ಪಿಸುತ್ತಿರುವರು. ಈಚೆಗೆ ಕೆಲವು ಜನ ವಿದ್ಯಾರ್ಥಿಗಳನ್ನು ಇಂಗ್ಲೆಂಡ್, ಜರ್ಮನೀ, ಅಮೇರಿಕಾ ಮತ್ತು ಜಪಾನ್ ದೇಶಗಳಿಗೆ ಕಳುಹಿಸಿ ಇರುತ್ತೇನೆ. ಇದಲ್ಲದೆ ಹೊಸ ಕೈಗಾರಿಕೆಗಳನ್ನು ಕಲಿಯುವದಕ್ಕೆ ಇನ್ನೂ ಕೆಲವರನ್ನು ಕಳುಹಿಸುವ ಏರ್ಪಾಡನ್ನು ಮಾಡುತ್ತಲಿದ್ದೇನೆ.

ಹೀಗೆ ಇಂಡಿಯಾದೇಶದ ಸ್ಥಿತಿಯು ವಿಲಕ್ಷಣವಾಗಿರುವದು. ಅಭಿವೃದ್ಧಿಗೆ ಬರಬೇಕೆಂಬ ಆಶೆಯು ಜನಗಳಿಗೆ ಹುಟ್ಟುತ್ತಿರುವದು. ಇಂಡಿಯಾದೇಶದ ಪಶ್ಚಿಮಘಟ್ಟಗಳಲ್ಲಿ ವಿದ್ಯುಚ್ಛಕ್ತಿಯನ್ನು ನಿರ್ಮಾಣಮಾಡಿ ಅದರಿಂದ ಬೊಂಬಾಯಿನಲ್ಲಿ ಯಂತ್ರಗಳನ್ನು ನಡಿಸಬೇಕೆಂಬ ಪ್ರಯತ್ನವು ನಡೆಯುತ್ತಿರುವದು. ಮದರಾಸ್ ಜನರು ಮರದ ಹತ್ತಿಯೇ ಮೊದಲಾದವುಗಳನ್ನು ಬೆಳೆದು ಯಂತ್ರಶಕ್ತಿಯಿಂದ ನಮ್ಮ ದೇಶಕ್ಕೆ ಬೇಕಾದಷ್ಟು ಬಟ್ಟೆಯನ್ನು ತಾವೇ ಮಾಡಬೇಕೆಂಬ ಕುತೂಹಲವುಳ್ಳವರಾಗಿರುವರು. ಮ॥ ತಾತಾರವರ ಶೋಧಕಶಾಲೆಯಿಂದ ಆಗಬಹುದಾದ ಅಭೂತಪೂರ್ವವಾದ ಪ್ರಯೋಜನಗಳನ್ನು ಇಂಡಿಯಾದೇಶೀಯರೆಲ್ಲರೂ ಎದುರುನೋಡುತ್ತಿರುವರು. ಬಹುಕಾಲದಿಂದ ಗಾಢವಾದ ನಿದ್ರೆಯನ್ನು ಮಾಡುತ್ತಿದ್ದ ಜನರು ಜಾಗರಾವಸ್ಥೆಯನ್ನು ಹೊಂದುತ್ತಿರುವರು. ಕೈಗಾರಿಕೆಗಳಲ್ಲಿ ಪಾಶ್ಚಾತ್ಯರಂತೆ ವೃದ್ಧಿಗೆ ಬರಬೇ

ಕಾದರೆ ಅವರಂತೆಯೇ ಬೇಜಾರನ್ನು ಹೊಂದದೆ ಸಹನದಿಂದಲೂ ಸಾಹಸದಿಂದಲೂ ಕೆಲಸಮಾಡಬೇಕೆಂಬ ಜ್ಞಾನವು ಜನಗಳಿಗೆ ಉಂಟಾಗುತ್ತಿರುವದು. ಇವುಗಳೆಲ್ಲಾ ನಮಗೆ ಉತ್ತರೋತ್ತರ ಉಂಟಾಗತಕ್ಕ ಸಂಪತ್ತಿಗೆ ಸೂಚಕಗಳೆಂದು ನಾನು ಭಾವಿಸುತ್ತೇನೆ.ನಾವೂ ಇತರರಂತೆ ವೃದ್ಧಿಗೆ ಬರುವದು ಕಷ್ಟವಲ್ಲ. ಇತರರಂತೆ ಸಾಹಸವೃತ್ತಿಗಳನ್ನು ಹೇಗೆ ಮಾಡಬೇಕೆಂಬದನ್ನು ನಾವು ಕಲಿಸಬೇಕು.ಯಾವವು ನಮಗೆ ಮುಖ್ಯಕರ್ತವ್ಯಗಳೋ ಮತ್ತು ಯಾವವು ಮುಖ್ಯಕರ್ತವ್ಯಗಳಲ್ಲವೋ ಅವುಗಳನ್ನು ಪರಿಶೋಧಿಸಿ ತಿಳಿದುಕೊಂಡು ವೃದ್ಧಿಗೆ ಬರುವ ಮಾರ್ಗವನ್ನು ನೋಡಬೇಕು. ಗ್ರೀಸ್ ದೇಶವು ಒಂದಾನೊಂದು ಕಾಲದಲ್ಲಿ ಅತ್ಯಂತ ಉನ್ನತವಾದ ಸ್ಥಿತಿಯಲ್ಲಿತ್ತು. ಪಶ್ಚಿಮ ದೇಶವೆಲ್ಲಾ ಈ ದೇಶೀಯರ ಆಜ್ಞೆಗೆ ಒಳಗಾಗಿದ್ದತ್ತು. ಪೆರಿಕ್ಲೀಸ್, ಪ್ಲೇಟೋ, ಅರಿಸ್ಟೋಟಲ್ ಎಂಬ ಹೆಸರುಗಳ ಉಚ್ಚಾರಣೆಯ ಮಾತ್ರದಿಂದಲೇ ಪ್ರಪಂಚವೆಲ್ಲಾ ವಿಸ್ಮಿತವಾಗುತ್ತಿತ್ತು.ಅಥೆನ್ಸ್ ಪಟ್ಟಣವು ಪ್ರಪಂಚಕ್ಕೆ ರಾಜಧಾನಿ ಎಂಬದಾಗಿ ಪರಿಗಣಿಸಲ್ಪಟ್ಟಿತ್ತು. ಈ ದೇಶೀಯನಾದ ಅಲಕ್ಸಾಂದ್ರನು ಪ್ರಪಂಚವನ್ನೆಲ್ಲಾ ಗೆದ್ದು 'ಗೆಲ್ಲುವದಕ್ಕೆ ಬೇರೇ ಪ್ರಪಂಚವಿಲ್ಲವಲ್ಲಾ' ಎಂದು ಸಂತಾಪಪಟ್ಟನು.ಇಂಥಾ ದೇಶಕ್ಕೆ ಈಗ ಉಂಟಾಗಿರತಕ್ಕ ಸ್ಥಿತಿಯನ್ನು ನೋಡಿದರೆ ಪರಮಾಶ್ಚರ್ಯವಾಗುತ್ತದೆ. ಇದಕ್ಕೆ ಕಾರಣವೇನು? ಅಧಿಕಾರಮದವೂ, ಐಶ್ವರ್ಯಮದವೂ ಮುಖ್ಯಕಾರಣಗಳು. ಈ ಮದಪ್ರವಿಷ್ಟರಾದ ಅಧಿಕಾರಿಗಳು ತಮ್ಮ ಸಂಪತ್ತಿಗೆ ಮೂಲಕಾರಣಗಳು ಯಾವವೋ ಅವುಗಳನ್ನು ಪರಿಶೀಲಿಸಿ ನೋಡಿದರೆ,ರಾಜ್ಯಲಕ್ಷ್ಮಿಯನ್ನು ಕಾಪಾಡಿಕೊಳ್ಳುವದಕ್ಕೆ ಸರಿಯಾದ ಉಪಾಯಗಳ್ಯಾವವೋ ಅವುಗಳನ್ನು ಅವಲಂಬಿಸದೇ ತಮ್ಮ ದೇಶದ ನಾವೆಗಳನ್ನೂ,ಮಿಲಿಟರೀ ಇಲಾಖೆಯನ್ನೂ ಯಾವರೀತಿಯಲ್ಲಿ ಇಟ್ಟುಕೊಳ್ಳಬೇಕೋ ಆ ವಿಷಯದಲ್ಲಿ ಉಪೇಕ್ಷೆಯನ್ನು ಮಾಡಿ, ತಮ್ಮ ದೇಶದ ವ್ಯಾಪಾರ, ಕೈಗಾರಿಕೆ ಮೊದಲಾದವುಗಳನ್ನು ಯಾವರೀತಿಯಲ್ಲಿ ವೃದ್ಧಿಗೆ ತರಬೇಕೋ ಆ ರೀತಿಯಲ್ಲಿ ತರದೇ ಉನ್ಮತ್ತಾವಸ್ಥೆಯನ್ನು ಹೊಂದಿದ್ದರಿಂದ ಅಪ್ರತಿಹತವಾದ ಚಕ್ರವರ್ತಿಪದವಿಯನ್ನು ಹೊಂದಿದ್ದ ಈ ದೇಶವೂಕೂಡ ಈಗ ಅತ್ಯಂತ ಹೀನಸ್ಥಿತಿಗೆ ಬಂದಿರುವದು.ಆ ದೇಶದ ವಿದ್ವಾಂಸರು ರಾಜತಂತ್ರಜ್ಞರಾದ ಸಚಿವರೆಂಬದಾಗಿಯೂ ತಾವೇ ಬೃಹಸ್ಪತಿಗಳೆಂಬದಾಗಿಯೂ ಭಾವಿಸಿಕೊಂಡು ಮಾಡಬೇಕಾದ ಕೆಲಸಗಳ ವಿಷಯದಲ್ಲಿ ಉದಾಸೀನರಾಗಿಲ್ಲದೇ ಇದ್ದಿದ್ದರೆ ಈಗ ಪ್ರಪಂಚದ ಚಕ್ರಾಧಿಪತ್ಯವೆಲ್ಲಾ ಅವರ ಸ್ವಾಧೀನದಲ್ಲಿಯೇ ಇರುತ್ತಿತ್ತು.ಆದರೆ ಗ್ರೀಸ್ ದೇಶೀಯರು ತಮ್ಮ ದೇಶದ ಗಣಿಗಳ ಮೂಲಾಧಾರಗಳನ್ನು ವೃಥಾ ಕಳೆದು ಬಿಟ್ಟರು. ಬಹು ದ್ರವ್ಯವನ್ನು ಚಿತ್ರವಿಚಿತ್ರವಾದ ದೇವಸ್ಥಾನಗಳನ್ನೂ, ಇತರ ಕಟ್ಟಡಗಳನ್ನೂ ಕಟ್ಟುವದರಲ್ಲಿ ವಿನಿಯೋಗಿಸಿದರು. ಸಂಗೀತ, ಸಾಹಿತ್ಯ, ಚಿತ್ರ, ವಿಟನಟಗಾಯಕ, ಮೊದಲಾದವರಿಗೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟರು. ದೇಶದ ಉತ್ಪತ್ತಿಯ ಅಭಿವೃದ್ಧಿಗೆ ಸಾಧಕವಾದ

ಕೃಷಿ, ಕೈಗಾರಿಕೆ, ವಾಣಿಜ್ಯ, ಧರ್ಮವಾದ ರಾಜ್ಯಭಾರಕ್ಕೆ ಸಾಧಕವಾದ ಧರ್ಮಶಾಸ್ತ್ರಜ್ಞಾನ, ಮೊದಲಾದವುಗಳಿಗೆ ಪ್ರೋತ್ಸಾಹವನ್ನು ತಪ್ಪಿಸಿದರು. ಅಧಿಕಾರಮದದಿಂದ ಈ ರೀತಿಯಲ್ಲಿ ಪ್ರವರ್ತಿಸಿದರೆ ಅದರ ಫಲವು ತಪ್ಪುವದಿಲ್ಲ. ಗ್ರೀಸ್‌ದೇಶವು ಅವರ ಔದಾಸೀನ್ಯದಿಂದ ಚಕ್ರವರ್ತಿಪದವಿಯನ್ನು ಕಳೆದುಕೊಂಡು ಬಹಳ ಶೋಚನೀಯವಾದ ಅವಸ್ಥೆಗೆ ಬಂದಿರುವದು. ಇದರ ಅವಸ್ಥೆಯೇ ಈಗಿನ ಇಂಡಿಯಾದೇಶಕ್ಕೆ ಹಿತೋಪದೇಶಕಾರಿಯಾಗಿ ಪರಿಣಮಿಸಿ ಇರುವದು. ನಾವು ವೃದ್ಧಿಗೆ ಬರಬೇಕಾದರೆ ಬಹಳ ಜಾಗರೂಕರಾಗಿರಬೇಕು. ಅನುಪಯುಕ್ತವಾದ ಖರ್ಚುಗಳನ್ನು ನಾವು ಎಂದಿಗೂ ಮಾಡಬಾರದು. ಯಾವ ಖರ್ಚನ್ನು ಮಾಡಿದರೆ ದೇಶದ ಸಂಪತ್ತು ಹೆಚ್ಚುವದೋ ಅಂಥಾ ಖರ್ಚನ್ನು ಮಾತ್ರ ಮಾಡಬೇಕು. ನಮ್ಮ ಏಳಿಗೆಗೆ ಪ್ರತಿಬಂಧಕರೂಪವಾದ ಜಾತಿದ್ವೇಷ, ಕುಲದ್ವೇಷಗಳನ್ನು ಪರಿತ್ಯಾಗಮಾಡಿ ಎಲ್ಲರೂ ಗುಣೈಕ ಪಕ್ಷಪಾತಿಗಳಾಗಿ ಇಂಡಿಯಾದೇಶವನ್ನು ವೃದ್ಧಿಗೆ ತರುವ ಏರ್ಪಾಡನ್ನು ಮಾಡಬೇಕು. ಈ ಪ್ರಪಂಚವೇ ನಿಜವಾದ ದೇವಸ್ಥಾನ ಸರ್ವವ್ಯಾಪಿಯಾದ ಜಗದೀಶ್ವರನೇ ನಿಜವಾದ ದೇವರು ಅವನ ಮಹಿಮೆಯಿಂದ ಉತ್ಪನ್ನರಾದ ನಾವೆಲ್ಲರೂ ಆತನ ಮಕ್ಕಳು, ಎಂಬ ಭಾವನೆಯನ್ನಿಟ್ಟು ಪರಸ್ಪರ ಸೌಹಾರ್ದವುಳ್ಳವರಾಗಿ ಐಕಮತ್ಯದಿಂದ ಪ್ರವರ್ತಿಸಿದ ಹೊರತೂ ನಾವು ಕೃತಕೃತ್ಯರಾಗುವದಿಲ್ಲ. ನಮಗೆ ಸ್ವಾತಂತ್ರ್ಯವು ದೊರೆಯುವದಿಲ್ಲ. ನಮ್ಮ ಸಮಯಾಚಾರಗಳು ನಿರ್ದುಷ್ಟವಾಗುವದಿಲ್ಲ. ನಮ್ಮ ಬುದ್ಧಿಯು ವಿಕಾಸವಾಗುವದಿಲ್ಲ. ಮಿತವ್ಯಯಜ್ಞಾನವು ನಮಗೆ ಲಭ್ಯವಾಗುವದಿಲ್ಲ. ದಾಸತ್ವವು ನಮಗೆ ತಪ್ಪುವದಿಲ್ಲ.

ರೋಮ್‌ಪಟ್ಟಣವು ಕೂಡ ನಮಗೆ ಎಷ್ಟೋ ಬುದ್ಧಿಯನ್ನು ಕಲಿಸತಕ್ಕದ್ದಾಗಿರುವದು. ಈ ಪಟ್ಟಣವು ಒಂದಾನೊಂದು ಕಾಲದಲ್ಲಿ ಈ ಪ್ರಪಂಚಕ್ಕೆ ರಾಜಧಾನಿಯಾಗಿತ್ತು. ಇಲ್ಲಿನ ಚಕ್ರವರ್ತಿಗಳು ಈ ಭೂಮಂಡಲಕ್ಕೆಲ್ಲಾ ಅಧಿಪತಿಗಳಾಗಿದ್ದರು. ಈಗ ಈ ಪಟ್ಟಣವು ಅತ್ಯಂತ ಹೀನಸ್ಥಿಗೆ ಬಂದಿರುವದು. ಇದಕ್ಕೇನು ಕಾರಣ? ಇಲ್ಲಿನ ಚಕ್ರವರ್ತಿಗಳು ನಿರಂಕುಶ ಪ್ರವರ್ತಕರಾಗಿದ್ದರು. ಈ ಚಕ್ರಾಧಿಪತ್ಯದನಾಶಕ್ಕೆ ಈ ನಿರಂಕುಶಪ್ರವರ್ತನೆಯೇ ಮುಖ್ಯಕಾರಣ. ಚಕ್ರವರ್ತಿಗಳು ಪ್ರಾಯಕವಾಗಿ ತುಂಬಾ ಸಂಪತ್ತನ್ನು ಉಳ್ಳವರಾಗಿರುವರು. ಧರ್ಮವಾದ ಪ್ರಭುತ್ವಕ್ಕೆ ಬೇಕಾದ ವಿವೇಕವೇ ಮೊದಲಾದ ಗುಣಾತಿಶಯಗಳು ಇವರಲ್ಲಿ ಮಿತವಾಗಿರುವವು. ಪ್ರಜಾರಂಜನೆಯನ್ನು ಮಾಡುವ ಶಕ್ತಿಯು ಇವರಲ್ಲಿ ಬೇಕಾದಮಟ್ಟಿಗೆ ಇರುವದಿಲ್ಲ. ಇದಕ್ಕೋಸ್ಕರವೇ ಪ್ರಜ್ಞಾವಂತರಾಗಿಯೂ, ಧರ್ಮಿಷ್ಠರಾಗಿಯೂ ಇರತಕ್ಕ ಸಚಿವರು ಇವರಿಗೆ ಬಹಳ ಆವಶ್ಯಕ ಪ್ರಜ್ಞೆಯುಳ್ಳವರು ಸಿಕ್ಕುವರು. ಆದರೆ ಧರ್ಮಿಷ್ಠರಾಗಿಯೂ ಪ್ರಜ್ಞೆಯುಳ್ಳವರಾಗಿಯೂ ಇರತಕ್ಕ ಸಚಿವರು ಸಿಕ್ಕಿದ

ಹೊರತು ಪ್ರಜಾರಂಜನೆಯಾಗುವದಿಲ್ಲ. ಈ ರಂಜನೆಗೆ ಬೇಕಾದ ತಿಳುವಳಿಕೆಯು ಪ್ರಭುಗಳಿಗೂ ಸಚಿವರಿಗೂ ಇಬ್ಬರಿಗೂ ಸಮಗ್ರವಾಗಿರಲಿಲ್ಲ. ಅಧಿಕಾರಮದದಿಂದ ಪ್ರಜೆಗಳು ಉಪೇಕ್ಷಿಸಲ್ಪಟ್ಟರು. ದಂಡೋಪಾಯದಿಂದ ಪ್ರಭುತ್ವವು ಮಾಡಲ್ಪಡುತ್ತಾ ಬಂತು; ಸಾಮ, ದಾನ, ಭೇದಗಳು ಉಪೇಕ್ಷಿಸಲ್ಪಟ್ಟವು. ಬಿಟ್ಟೀ ಬೇಗಾರಿಗಳು ಹೆಚ್ಚಿದವು. ಸಂಸ್ಥಾನಾಧಿಪತಿಗಳು ಸ್ವಕಾರ್ಯಧುರಂಧರರಾಗಿಯೂ ಅಧಿಕಾರಿಗಳು ಸೋಮಾರಿಗಳಾಗಿಯೂ, ಇಂದ್ರಿಯಪರವಶರಾಗಿಯೂ, ದುರ್ಮಾರ್ಗಪ್ರವರ್ತಕರಾಗಿಯೂ ಆದರು. ದೇಶದ ಉತ್ಪತ್ತಿಗೆ ಕಾರಣಭೂತರಾದ ಪ್ರಜೆಗಳು ದರಿದ್ರರಾಗಿಯೂ, ಈತಿಬಾಧೆಗಳಿಂದ ಹತರಾಗಿಯೂ ಚಿಂತಾಕ್ರಾಂತರಾಗಿಯೂ ಆದರು. ಪ್ರಜೆಗಳ ಧೈರ್ಯಸ್ಥೈರ್ಯ ಸಾಹಸಗಳು ಸರಕಾರದ ನಿರಂಕುಶ ಪ್ರವರ್ತನೆಯಿಂದ ಮೂಲೋತ್ಪಾಟನ ಮಾಡಲ್ಪಟ್ಟವು. ರಾಜ್ಯಭಾರಕ್ಕೆ ಅಸ್ತಿಭಾರಪ್ರಾಯರಾದ ಪ್ರಜೆಗಳು ಇಷ್ಟು ಹೀನಸ್ಥಿತಿಗೆ ಬಂದಕೂಡಲೇ ದುರ್ಬಲವಾದ ಅಸ್ತಿಭಾರವುಳ್ಳ ಕಟ್ಟಡವು ಹೇಗೆ ಬಿದ್ದುಹೋಗುವದೋ ಹಾಗೆ ರೋಮನ್ ಚಕ್ರಾಧಿಪತ್ಯವು ಬಿದ್ದುಹೋಯಿತು. ಪ್ರಾಜ್ಞರಾದವರು ಇಂಥಾ ವಿಪತ್ತುಗಳನ್ನು ನೋಡಿ ಈ ವಿಪತ್ತುಗಳಿಗೆ ಕಾರಣವನ್ನು ಗೊತ್ತುಮಾಡಿಕೊಂಡು ಅಂಥಾ ವಿಪತ್ತುಗಳಿಗೆ ತಾವು ಗುರಿಯಾಗದಂತೆ ಮಾಡಿಕೊಳ್ಳಬೇಕು. ಯಾವಕಾರಣದಿಂದ ರೋಮನ್ ಚಕ್ರಾಧಿಪತ್ಯವು ನಾಶವಾಯಿತೋ ಅದನ್ನು ನಾವು ಪರಿಶೀಲಿಸಿ ಅಂಥಾ ತಪ್ಪುಗಳಿಗೆ ಅವಕಾಶವನ್ನು ಕೊಡದೇ ಇರುವದು ನಮ್ಮ ಏಳಿಗೆಗೆ ಅತ್ಯಂತ ಸಾಧಕವಾದದ್ದು.

ಈಗ ಇಂಡಿಯಾದೇಶದ ಸ್ಥಿತಿಯು ಬಹಳ ವಿಷಮವಾಗಿ ಇರುವದು. ನಮ್ಮ ದೇಶೀಯರ ಕ್ಷೇಮವು ಉತ್ತರೋತ್ತರ ಯಾವರೀತಿಯಲ್ಲಿ ಪರಿಣಮಿಸುವದೋ ಗೊತ್ತಾಗುವದಿಲ್ಲ. ರೋಮ್ ದೇಶದ ಪರಾಭವವನ್ನು ನಿರಂತರದಲ್ಲಿಯೂ ನಾವು ಮನಸ್ಸಿನಲ್ಲಿಟ್ಟುಕೊಳ್ಳುವದು ಅವಶ್ಯಕ. ನಾವು ವೃದ್ಧಿಗೆ ಬರಬೇಕಾದರೆ ನಮ್ಮ ದೇಶೀಯರಲ್ಲಿ ಕೆಳಗಿನ ಅಂತಸ್ಥಿನಲ್ಲಿರತಕ್ಕವರಿಗೆ ವಿದ್ಯಾಭ್ಯಾಸವನ್ನು ಮಾಡಿಸಿ ನಾವು ಅವರನ್ನು ಮೇಲಕ್ಕೆ ಎತ್ತಬೇಕು. ನಮ್ಮ ದೇಶದ ಸ್ಥಿತಿಗೆ ನಾವೂಕೂಡ ಕಾರಣಭೂತರೆಂಬ ಅಭಿಪ್ರಾಯವನ್ನು ಅವರಿಗೆ ಹುಟ್ಟಿಸಬೇಕು. ನಮ್ಮ ಸಂಘದಲ್ಲಿ ಅವರು ಕನಿಷ್ಠರೆಂಬ ಅಭಿಪ್ರಾಯಕ್ಕೆ ಅವಕಾಶಕೊಡಕೂಡದು. ನಮ್ಮ ಏಳಿಗೆಗೆ ವ್ಯವಸಾಯ, ಕೈಗಾರಿಕೆ ಮೊದಲಾದ ನಮ್ಮ ದೇಶದ ಸಂಪತ್ತನ್ನು ಅಭಿವೃದ್ಧಿಮಾಡುವ ಜನಗಳೇ ಕಾರಣಭೂತರು. ಅವರಿಗೆ ವಿದ್ಯಾಭ್ಯಾಸಮಾಡಿಸುವದೂ ತಾರತಮ್ಯಜ್ಞಾನವನ್ನುಂಟುಮಾಡುವದೂ. ಅವರ ಕೆಲಸಗಳಲ್ಲಿ ಅವರು ಪ್ರವೀಣರಾಗುವಂತೆ ಮಾಡುವದೂ ಇವೆಲ್ಲಾ ನಮಗೆ ಮುಖ್ಯಕರ್ತವ್ಯ. ಅವರು ಆತ್ಮಾವಲಂಬಿಗಳಾಗುವಂತೆ ನಾವು ಅವರಿಗೆ ಸಹಾಯವನ್ನು ಮಾಡಬೇಕು. ನಾವು ಅವರನ್ನು ಉದ್ಧಾರಮಾಡುತ್ತೇವೆಯೆಂದು

ನಾವು ತಿಳಿದುಕೊಳ್ಳುವದು ಕರ್ತವ್ಯ. ಅವರಿಂದ ಆಗತಕ್ಕ ಉಪಕಾರಕ್ಕೆ ನಾವು ಪ್ರತಿಫಲವನ್ನು ಅವರಿಗೆ ಉಂಟುಮಾಡಿ ಕೃತಾರ್ಥರಾಗುತ್ತೇವೆಯೆಂದು ತಿಳಿದುಕೊಳ್ಳಬೇಕು.

ನಮ್ಮ ಜನಗಳು ಮಿತವ್ಯಯದ ಧರ್ಮಗಳನ್ನು ಚನ್ನಾಗಿ ತಿಳಿದುಕೊಳ್ಳಕು. ಜನಗಳಿಗೆ ಪ್ರಾಮಾಣಿಕರಾಗಿಯೂ, ಬುದ್ಧಿಶಾಲಿಗಳಾಗಿಯೂ, ಕಾರತನ್ಮಜ್ಞರಾಗಿಯೂ, ಪೂರ್ವಾಪರಜ್ಞಾನವುಳ್ಳವರಾಗಿಯೂ, ಪಾಪಭೀತರಾಗಿಯೂ, ಇರುವದನ್ನು ಕಲಿಸಬೇಕು. ಅವರು ಈ ಧರ್ಮಗಳನ್ನೆಲ್ಲಾ ಅನುಷ್ಠಾನಕ್ಕೆ ತಂದುಕೊಂಡು ಎಲ್ಲಾ ವಿಧವಾದ ಕೈಗಾರಿಕೆಗಳಲ್ಲಿಯೂ, ಪ್ರವೀಣರಾಗಿ ಪ್ರಪಂಚಕ್ಕೆ ಭೋಗ್ಯವಸ್ತುಗಳು ಸುಲಭವಾಗಿ ದೊರೆಯುವಂತೆ ಮಾಡಿದರೆ ಅವರು ಪರೋಪಕಾರವನ್ನು ಮಾಡುವದರ ಮೂಲಕ ಆತ್ಮಹಿತವನ್ನೂ ಮಾಡಿಕೊಳ್ಳುವದಕ್ಕೆ ಶಕ್ಯಶಕ್ತಿಯುಳ್ಳವರಾಗಿರುತ್ತಾರೆ.

ಪೂರ್ವದ ಭಾರತೀಯರು ಕೈಗಾರಿಕೆಗಳಲ್ಲಿ ಬುದ್ಧಿಶಾಲಿಗಳಾಗಿದ್ದ ವಿಷಯವನ್ನು ನಾನು ಮೊದಲೇ ತಿಳಿಸಿರುವೆನು. ಆದರೆ ಅವರು ಯಂತ್ರಗಳ ನಿರ್ಮಾಣದಲ್ಲಿ ವಿಶೇಷ ಚತುರರಾಗಿರಲಿಲ್ಲ. ಯಂತ್ರಗಳನ್ನು ನಿರ್ಮಿಸುವ ಕೆಲಸವು ಕೆಲವು ಜಾತಿಗಳಿಗೆ ಸೇರಿದ್ದವು. ಆಜಾತಿಯವರು ವಿಶೇಷ ತಿಳುವಳಿಕೆಯುಳ್ಳವರಾಗಿರಲಿಲ್ಲ. ನಮ್ಮ ಶಿಲ್ಪಿಗಳು ಪೂರ್ವದಲ್ಲಿ ಇದ್ದ ಗ್ರೀಸ್‌ದೇಶದ ಶಿಲ್ಪಿಗಳಿಗೆ ಸಮಾನರಾಗಿರಲಿಲ್ಲ. ನಮ್ಮ ಯಂತ್ರಗಳು ಪಾಶ್ಚಾತ್ಯರಿಂದ ನಿರ್ಮಾಣಮಾಡಲ್ಪಟ್ಟ ಯಂತ್ರಗಳಿಗೆ ಸಮಾನವಾಗಿರುವದಿಲ್ಲ. ನಮ್ಮಲ್ಲಿ ಮೇಧಾವಿಗಳಾದವರು ಅನೇಕವರುಷಗಳಿಂದ ಕೈಗಾರಿಕೆಗಳನ್ನು ಉಪೇಕ್ಷಿಸಿದರು. ಈ ಕೆಲಸಗಳೆಲ್ಲಾ ವಿಶೇಷ ಬುದ್ಧಿಶಕ್ತಿಯಿಲ್ಲದವರ ಪಾಲಾಗಿತ್ತು. ಆದುದರಿಂದಲೇ ಅವುಗಳು ಅಭಿವೃದ್ಧಿಯಾಗುವದಕ್ಕೆ ಅವಕಾಶವಾಗಲಿಲ್ಲ. ಸಾಹಿತ್ಯದಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ. ನಮ್ಮ ಜನಗಳು ಹೊಂದಿರತಕ್ಕ ಜ್ಞಾನವು ಪಾಶ್ಚಾತ್ಯರು ಇದೇವಿಷಯದಲ್ಲಿ ಹೊಂದಿರತಕ್ಕ ಜ್ಞಾನಕ್ಕೆ ಕಡಮೆಯಾಗಿಲ್ಲ. ಕಲಾಕೌಶಲ್ಯವು ಸಾಮಾನ್ಯಜನಗಳ ಪಾಲಾಗಿದ್ದಾಗ್ಯೂ ಅವರು ಅದ್ಭುತವಾದ ಶಕ್ತಿಯನ್ನು ತೋರಿಸಿ ಇರುವರು. ಬ್ರಾಹ್ಮಣರೂ ಮತ್ತು ಮಾಲ್ವಿಗಳೂ ತಮ್ಮ ವೈದುಷ್ಯದ ಜೊತೆಗೆ ಕೈಗಾರಿಕೆಗಳನ್ನೂ ಅಭ್ಯಾಸಮಾಡಬೇಕು. ಬಿ. ಎ. ಪರೀಕ್ಷೆಗಳನ್ನು ಕೊಟ್ಟ ವಿದ್ಯಾರ್ಥಿಗಳು ಸರಕಾರದ ಉದ್ಯೋಗವನ್ನು ಅಪೇಕ್ಷಿಸುವದಕ್ಕೆ ಬದಲಾಗಿ ಕೈಗಾರಿಕೆಗಳನ್ನು ಮಾಡುವದಕ್ಕೆ ಉಪಕ್ರಮಿಸಬೇಕು. ವಿದ್ಯಾವಂತರು ಈ ಕೆಲಸಗಳಿಗೆ ಪ್ರವೇಶಿಸಿದರೆ ಕೈಗಾರಿಕೆಗಳನ್ನು ಹೇಗೆ ಅಭಿವೃದ್ಧಿಗೆ ತರಬೇಕೋ ಅದು ಅವರಿಗೆ ಗೊತ್ತಾಗುವದು. ಪಾಶ್ಚಾತ್ಯರಲ್ಲಿ ಅಖಂಡ ಪಾಂಡಿತ್ಯವನ್ನು ಹೊಂದಿದ ಮಹಾವಿ

ದ್ಯಾಂಸರು ಕೈಗಾರಿಕೆಗಳನ್ನೂ, ವ್ಯಾಪಾರವನ್ನೂ ಅವಲಂಬಿಸಿದ್ದರಿಂದ ಕೋಟ್ಯಂತರಜನಗಳಿಂದ ಮಾಡಲ್ಪಡತಕ್ಕ ಕೆಲಸಗಳನ್ನೂ ಕೂಡ ಯಂತ್ರಸಾಮಗ್ರಿಗಳಿಂದ ಮಾಡಿಸುವದಕ್ಕೆ ಮೊದಲು ಮಾಡಿದರು. ಪಾಶ್ಚಾತ್ಯರು ಯಾವಾಗ್ಯೂ ಈಗಿನಷ್ಟು ಕೌಶಲ್ಯವುಳ್ಳವರಾಗಿಲಿಲ್ಲ. ಅವರೂ ಕೆಲವು ವರುಷಗಳ ಕೆಳಗೆ ತಿಳುವಳಿಕೆಯ ವಿಷಯದಲ್ಲಿಯೂ, ಕೈಗಾರಿಕೆಗಳ ವಿಷಯದಲ್ಲಿಯೂ ಯಂತ್ರರಚನೆಗಳ ವಿಷಯದಲ್ಲಿಯೂ ಏನೂ ತಿಳಿಯದವರಾಗಿದ್ದರು. ಆದರೆ ಹೊಸವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಶ್ರದ್ಧೆಯು ಅವರಲ್ಲಿ ವಿಶೇಷವಾಗಿದ್ದದ್ದರಿಂದ ಅವರು ವೃದ್ಧಿಗೆ ಬರುವದಕ್ಕೆ ಅವಕಾಶವಾಯಿತು.

ಪಾಶ್ಚಾತ್ಯರಿಂದ ನಾವು ತಿಳಕೊಳ್ಳತಕ್ಕದ್ದು ಇನ್ನೊಂದು ವಿಷಯವಿರುವದು. ಇವರಲ್ಲಿ ಬಹುಜನಗಳು ಸೇರಿ ಕಂಪೆನಿಗಳನ್ನು ಮಾಡಿಕೊಂಡು ಪರಸ್ಪರ ಸಹಾಯದಿಂದ ಬಂಡವಾಳವನ್ನು ಒದಗಿಸಿಕೊಂಡು ಮಿತವಾಗಿ ಖರ್ಚುಮಾಡಿ ತನ್ನೊಳಕ ಅಭಿವೃದ್ಧಿಗೆ ಬರುವ ಪ್ರಯತ್ನಗಳು ಸಮಗ್ರವಾಗಿರುವವು. ಇದರಿಂದಲೇ ಅವರು ವೃದ್ಧಿಗೆ ಬರುತ್ತಲಿರುವರು. ಅವರು ಮಿತವಾಗಿ ಖರ್ಚುಮಾಡಿ ವಸ್ತುಗಳನ್ನು ನಿರ್ಮಿಸಿ ಅವುಗಳು ಸರ್ವರಿಗೂ ಸುಲಭವಾಗಿ ಸಿಕ್ಕುವಂತೆ ಮಾಡಿ ಅದರಿಂದ ತಾವೂ ಜೀವಿಸುವರು. ಮಿತವ್ಯಯವೂ ಧರ್ಮಜ್ಞಾನವೂ ಅವರ ಅಭಿವೃದ್ಧಿಗೆ ಮುಖ್ಯಕಾರಣ. ಈ ಶಾಸ್ತ್ರವನ್ನ ಅವರು ಕಾಲೇಜುಗಳಲ್ಲಿಯೂ, ಪಾಠಶಾಲೆಗಳಲ್ಲಿಯೂ ಪ್ರಚಾರಪಡಿಸುತ್ತಲಿರುವರು. ಈ ಶಾಸ್ತ್ರಧರ್ಮಗಳನ್ನು ಕಲಿಯಲಪೇಕ್ಷೆಯುಳ್ಳವರು ಪಾಶ್ಚಾತ್ಯರ ಸಕಲಕಲಾಶಾಲೆಯಲ್ಲಿ ಕಲಿಯುವ ಪ್ರಯತ್ನವನ್ನ ಮಾಡಬೇಕು.

ರಾಜಕೀಯ ವಿಷಯಗಳಲ್ಲಿಯೂ, ವ್ಯಾಪಾರದ ವಿಷಯದಲ್ಲಿಯೂ ಸಂಘಸಂಸ್ಕಾರದ ಕೆಲಸದಲ್ಲಿಯೂ ಪಾಶ್ಚಾತ್ಯರು ಬಹಳ ತಿಳುವಳಿಕೆಯುಳ್ಳವರು. ಸುಮಾರು ೬೦೦ ವರ್ಷಗಳಿಗೆ ಮುಂಚೆ ಪಾಶ್ಚಾತ್ಯರಲ್ಲಿ ಪಾದ್ರಿಗಳ ಅವಾಂತರವು ಬಹಳ ಜಾಸ್ತಿಯಾಗಿತ್ತು. ಮಾರ್ಟಿನ್ ಲೂಥರ್‌ರವರ ಕಾಲದಲ್ಲಿ ಇವರ ಪ್ರಾಬಲ್ಯವು ಅತ್ಯಂತವಾಗಿ ಹೆಚ್ಚಿದ್ದರಿಂದ ಲೂಥರ್‌ರವರು ಮತವಿಚಾರದಲ್ಲಿ ದಂಗೆಯನ್ನು ಮಾಡಿ ಈ ಪಾದ್ರಿಗಳ ಸೊಕ್ಕನ್ನು ಮುರಿದರು. ಆಗಲೇ ಪ್ರಾಟೆಸ್ಟಂಟ ಮತವು ಉಂಟಾಯಿತು. ಮತವಿಷಯಗಳಲ್ಲಿರತಕ್ಕ ಭೇದಗಳು ಲೋಕವ್ಯವಹಾರದಲ್ಲಿ ಇರಬೇಕಾದ ಸೌಹಾರ್ದಕ್ಕೆ ಪ್ರತಿಬಂಧಕವಾಗಕೂಡದು. ಈ ಭೇದಗಳಿಗೂ ವ್ಯವಸಾಯ, ವ್ಯಾಪಾರ, ಕೈಗಾರಿಕೆ, ರಾಜ್ಯಭಾರ ಮೊದಲಾದ ವಿಷಯಗಳಿಗೂ ಸಂಬಂಧವೇನೂ ಇರುವುದಿಲ್ಲ. ಮತವಿಷಯಗಳಲ್ಲಿ ಭಿನ್ನಾಭಿಪ್ರಾಯವಿದ್ದ ಮಾ

ತ್ರದಿಂದಲೇ ಇತರ ವಿಷಯಗಳಲ್ಲಿ ಐಕಮತ್ಯವೂ, ಪರಸ್ಪರಾನುರಾಗವೂ ಏಕಕ್ಕೆ
ರಕೂಡದು? ಪಾಶ್ಚಾತ್ಯರ ಶಾಸ್ತ್ರಗಳೂ ಕೈಗಾರಿಕೆಗಳೂ ಸ್ವಶಕ್ತಿಯಿಂದ ಜೀವಿಸ
ವದಕ್ಕೆ ಅತ್ಯಂತ ಸಹಾಯಕಾರಿಗಳು. ನಮ್ಮ ಜನಾಂಗದ ಆಮುಷ್ಮಿಕ ಕ್ಷೇಮ
ಕ್ಕೆ ನಮ್ಮ ಮತಧರ್ಮಗಳು ಅಸ್ತಿಭಾರಪ್ರಾಯವಾಗಿರುವುವು. ಆದರೆ ಐಹಿ
ವ್ಯಾಪಾರಗಳಲ್ಲಿ ನಿಶ್ಚಿಂತೆಯು ಇದ್ದ ಹೊರತೂ ಆಮುಷ್ಮಿಕವು ಎಂದಿಗೂ ಫಲಿಸು
ದಿಲ್ಲ. ಒಂದು ಜಾತಿ ದೊಡ್ಡದು, ಮತ್ತೊಂದು ಕನಿಷ್ಠವೆಂಬ ಭೇದಭಾವವನ್ನ
ವಿಸರ್ಜಿಸಬೇಕು. ಇಂಥಾ ಭಾವನೆಗೆ ಅವಕಾಶವೇನೂ ಇರುವದಿಲ್ಲ. ಸಮಸ್ತ
ಜಾತಿಗಳೂ ಆ ಜಾತಿಗೆಸೇರಿದ ಜನಗಳ ವೃತ್ತಿಯ ನಿರ್ಣಯಾರ್ಥವಾಗಿ ಹುಟ್ಟಿ
ದವುಗಳು. ದೇಶಹಿತಾರ್ಥವಾಗಿಯೂ ಪರಾರ್ಥವಾಗಿಯೂ ನಮ್ಮ ಸೌಖ್ಯವನ್ನೂ
ಲಾಭವನ್ನೂ, ಪ್ರಾಣವನ್ನೂ ಆವಶ್ಯಕವಾದ ಕಾಲದಲ್ಲಿ ಒಪ್ಪಿಸುವದೇ ದೇಶಾಭಿಮಾ
ನದ ಲಕ್ಷಣ. ಉತ್ತಮವರ್ಣಾಶ್ರಮದವರು ಹೀನಸ್ಥಿತಿಯಲ್ಲಿರತಕ್ಕವರನ್ನು ತಮ
ಸರಿಸಮಾನರನ್ನಾಗಿ ಮಾಡಿಕೊಳ್ಳುವದೇ ಪರಮಧರ್ಮ. ವಾಗ್ವಿಜೃಂಭಣೆಯ
ನ್ನು ಕಡಿಮೆಮಾಡಿ ಮನೋವಾಕ್ಕಾಯಗಳಲ್ಲಿಯೂ ಸದ್ಧರ್ಮಗಳನ್ನು ಅನುಷ್ಠಿ
ಸುವದೇ ನಮಗೆ ಮುಖ್ಯ ಕರ್ತವ್ಯ. ನಾವೆಲ್ಲರೂ ಭಾರತೀಯರು. ನಾವೆಲ್ಲ
ರೂ ವೃದ್ಧಿಗೆ ಬರಬೇಕು. ನಮ್ಮಲ್ಲಿ ಕೆಲವರು ಕೆಟ್ಟುಹೋಗಲೀ, ನಾವು ವೃದ್ಧಿಗೆ
ಬರೋಣ ಎಂಬದಾಗಿ ಯಾರೂ ಭಾವಿಸಬಾರದು. ನೂರಾರು ತಂತುಗಳು ಸೇರಿ
ದರೆ ಅದು ಒಂದು ಹೊರ್ಜಿಯಾಗುವದು. ಅದರಿಂದ ಮದಿಸಿದ ಆನೆಗಳನ್ನೂ ಕೂ
ಡ ಕಟ್ಟಬಹುದು. ತಂತುಗಳು ಪ್ರತ್ಯೇಕವಾದರೆ ಅಲ್ಪವಾದ ಹುಳಗಳನ್ನು ಕಟ್ಟು
ವದಕ್ಕೂ ಕೂಡಾ ಆಗುವದಿಲ್ಲ. ನಾನು ಹೆಚ್ಚು, ತಾನು ಹೆಚ್ಚು, ಎಂಬ ದುರಭಿಮಾ
ನದಿಂದ ಎಲ್ಲರೂ ನಿರ್ಮೂಲವಾಗುವ ಏರ್ಪಾಡನ್ನು ಮಾಡಿಕೊಳ್ಳಬಾರದು. ನಾ
ವು ಪರಸ್ಪರ ವಿರೋಧವುಳ್ಳವರಾಗಿಯೂ ಭಿನ್ನಾಭಿಪ್ರಾಯವುಳ್ಳವರಾಗಿಯೂ ದೇ
ಶಹಿತಾರ್ಥವಾಗಿ ಕೂಡ ಏಕಮತ್ಯದಿಂದ ಸೇರುವ ಶಕ್ತಿಯಿಲ್ಲದವರಾಗಿಯೂ ಆ
ಗುತ್ತೇವೆಂದು ನಿಸ್ಪೃಹರಾದವರೆಲ್ಲರೂ ಹೇಳುತ್ತಾರೆ. ಇದು ನಿಜವಾದ ಮಾತು
ನಾವು ದುರಭಿಮಾನವನ್ನು ಬಿಟ್ಟು ಪೂರ್ವಾಪರಜ್ಞಾನವನ್ನು ಸಂಪಾದಿಸಿಕೊಂಡು
ಪರಸ್ಪರಸಹಾಯವುಳ್ಳವರಾಗಿ ಗುಣೈಕಪಕ್ಷಪಾತಿಗಳಾಗಿಯೂ ದೇಶದ ಕ್ಷೇಮ
ವು ಅಭಿವೃದ್ಧಿಗೆ ಬರಬೇಕಾದರೆ ಹೇಗೆ ಪರಸ್ಪರ ಪ್ರೀತಿಯುಳ್ಳವರಾಗಬೇಕೋ ಅದ
ನ್ನು ಗೊತ್ತುಮಾಡಿಕೊಂಡು ಅನುಷ್ಠಾನಕ್ಕೆ ತರತಕ್ಕವರಾಗಿಯೂ ಆಗಬೇಕು.

ಕಳೆದ ನೂರೈವತ್ತು ವರುಷಗಳಿಂದ ಪಾಶ್ಚಾತ್ಯರಲ್ಲಿ ಲೌಕಿಕಸುಖಹೇ
ತುಗಳಾದ ಶಾಸ್ತ್ರಗಳು ವಿಶೇಷವೃದ್ಧಿಗೆ ಬರುತ್ತಲಿವೆ. ರೈಲ್‌ಶಸ್ತ್ರಗಳು, ಹೊಗೆ

ಜಹಜುಗಳು, ವಿದ್ಯುಚ್ಛಕ್ತಿಯು, ತಂತೀವರ್ತಮಾನಗಳು, ತಂತಿಗಳ ಮೂಲಕ ಸಂ
ಭಾಷಣೆಯು, ಸಂಘರ್ಷಣೆಯಿಂದ ಬೆಂಕಿಯನ್ನುಂಟುಮಾಡುವ ದೀಪದ ಕಡ್ಡಿಗಳು,
ಗ್ಯಾಸಿನದೀಪಗಳು, ವಿದ್ಯುಚ್ಛಕ್ತಿಯಿಂದ ಮಾಡಿಸಲ್ಪಡತಕ್ಕ ನಾನಾವಿಧವಾದ ಕೆಲ
ಸಗಳು, ಗಾನವನ್ನು ಪರಿಗ್ರಹಿಸಿ ಬೇಕಾದಾಗ ಹಾಡುವ ಯಂತ್ರಗಳು, ದೇಹದಲ್ಲಿ
ಇರತಕ್ಕ ಪದಾರ್ಥಗಳನ್ನು ತೋರಿಸುವ ರಂಜನ್ ರೇಸ್ ಎಂಬ ವಿದ್ಯುಚ್ಛಕ್ತಿಯ
ಕಿರಣಗಳು, ಬೆಳಕಿನಲ್ಲಿರತಕ್ಕ ಬಣ್ಣಗಳನ್ನು ತೋರಿಸುವ ಯಂತ್ರಗಳು, ವ್ರಣಚಿಕಿತ್ಸೆ
ಯನ್ನು ಮಾಡುವುದರಲ್ಲಿ ನೋವಾಗದಂತೆ ಮಾಡುವದಕ್ಕೋಸ್ಕರ ಸಾಧಕಗಳಾದ
ಧೃತಿಗಳು, ವಸ್ತುಶಾಸ್ತ್ರ, ಭೌತಿಕಶಾಸ್ತ್ರ, ಶಕ್ತಿಶಾಸ್ತ್ರ, ರೋಗದ ಬೀಜಗಳನ್ನು
ನಿರ್ಣಯಮಾಡುವ ಶಾಸ್ತ್ರ, ಇವೇ ಮೊದಲಾದ ಅನೇಕ ಶಾಸ್ತ್ರಗಳು ಇವುಗಳೆಲ್ಲಾ
ಬಹಳ ಉಪಕಾರಿಗಳಾಗಿ ಪರಿಣಮಿಸಿ ಇವೆ. ಇವುಗಳನ್ನೆಲ್ಲಾ ಚನ್ನಾಗಿ ಅಭ್ಯಾಸ
ಮಾಡಿ ಈ ವಿಷಯಗಳಲ್ಲಿ ನಾವು ಪಾಶ್ಚಾತ್ಯರಿಗೆ ಸಮನೆಂದೆನ್ನಿಸಿಕೊಳ್ಳಬೇಕು. ನ
ಮ್ಮ ಭಾರತೀಯರಲ್ಲಿ ಬುದ್ಧಿಶಕ್ತಿಯು ಸಂಪೂರ್ಣವಾಗಿ ಹೋಯಿತೆಂಬದಾಗಿಯೂ
ನಮ್ಮ ಬುದ್ಧಿಗಳಿಗೆಲ್ಲಾ ವಾರ್ಧಿಕ್ಯವು ಬಂದಿರುವದೆಂಬದಾಗಿಯೂ, ಪಾಶ್ಚಾತ್ಯರು
ತ್ರಿದಶರ ಅವಸ್ಥೆಯಲ್ಲಿರುವರೆಂಬದಾಗಿಯೂ, ನಮ್ಮ ಪೂರ್ವೀಕರಿದ್ದ ಸ್ಥಿತಿಗೆ ನಾ
ವು ಬರುವ ಪ್ರಯತ್ನವನ್ನು ಮಾಡಬೇಕೆಂಬದಾಗಿಯೂ ಅನೇಕರು ಹೇಳಿ
ಕೊಳ್ಳುವರು. ನಮ್ಮ ದೇಶೀಯರ ಬುದ್ಧಿಶಕ್ತಿಗೆ ಇಂಥಾ ವಾರ್ಧಿಕ್ಯವು ಬಂದಿ
ರುವಂತೆ ನನಗೆ ತೋರುವದಿಲ್ಲ. ನಾನು ಪಾಶ್ಚಾತ್ಯರನ್ನು ಅವರ ದೇಶದಲ್ಲೇ
ನೋಡಿ ಇರುತ್ತೇನೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಅವರಲ್ಲಿ ಬುದ್ಧಿಶಾಲಿಗಳಾದ
ವರೆಲ್ಲರೂ ಸೇರಿ ಇರುತ್ತಾರೆ. ಅವರು ಎಷ್ಟು ಮೇಧಾವಿಗಳಾದಾಗ್ಯೂ ಅವರ
ಸಂದರ್ಭಗಳನ್ನು ನೋಡಿದರೆ ಬಹಳ ವ್ಯಸನವಾಗುತ್ತದೆ. ಅವರ ಧರ್ಮಗಳೂ ಆರೋ
ಗ್ಯವೂ ಉತ್ತಮಸ್ಥಿತಿಯಲ್ಲಿರುವದಿಲ್ಲ. ಅವರ ದೇಶದಲ್ಲಿ ಬಂಡವಾಳಸ್ಥರಿಗೂ ಕೆ
ಲಸಗಾರರಿಗೂ ಜಗಳವು ಇದ್ದೇ ಇರುವದು. ಧನಪಿಶಾಚದಿಂದ ಪ್ರತಿನಿವಿಷ್ಟರಾ
ಗದೇ ಇರತಕ್ಕ ಜನರು ಇವರಲ್ಲಿ ಅಪೂರ್ವವಾಗಿರುತ್ತಾರೆ. ಎಲ್ಲಿ ನೋಡಿದಾ
ಗ್ಯೂ ಸಂಪದ್ವಿಜೃಂಭಣೆಯೂ, ದ್ರವ್ಯದ ಪೂಜೆಯೂ ನಡೆಯುತ್ತಲಿರುವದು. ವೈ
ರಾಗ್ಯವು ಸಾಮಾನ್ಯವಾದ ಜೀವನವು. ಐಹಿಕ ಸುಖದಲ್ಲಿ ಆಸಕ್ತಿಯೂ ಆಮುಷ್ಮಿ
ಕ ಸಾಧನೆಗೆ ಮಾಡಬೇಕಾದ ಕೆಲಸಗಳಲ್ಲಿ ಔದಾಸೀನ್ಯವೂ ವಿಶೇಷವಾಗಿರುತ್ತವೆ.
ಪುಂಡುಗಾರಿಕೆಯಲ್ಲಿ ಪಾಶ್ಚಾತ್ಯರು ನಿಪುಣರಾಗುತ್ತಲಿದ್ದಾರೆ. ವಿಷಯಯು, ಸ್ವಾ

ತ್ವಿಕವಾದ ಜೀವನ, ಧರ್ಮಪ್ರವರ್ತನೆ ಇವುಗಳೆಲ್ಲಾ ಪ್ರತ್ಯಕ್ಷಗಳಾಗುತ್ತಲಿವೆ. ಐಹಿಕಸುಖಸಾಧನಗಳಾದ ಶಾಸ್ತ್ರಗಳೂ ಕಲೆಗಳೂ ಒಳ್ಳೇ ಸ್ಥಿತಿಯಲ್ಲಿರುತ್ತವೆ. ಅವುಗಳನ್ನು ಅವರಿಂದ ಕಲಿಯಬೇಕು. ನಮ್ಮಲ್ಲಿ ಆಮುಷ್ಮಿಕ ಸುಖಸಾಧನಗಳಾದ ಅನೇಕ ವಿದ್ಯೆಗಳು ಇವೆ. ಪಾಶ್ಚಾತ್ಯರಿಗೆ ಬೇಕಾ.. ಆಮುಷ್ಮಿಕ ವಿದ್ಯೆಗಳನ್ನು ನಾವು ಬೋಧಿಸಿ ಅವರಿಂದ ನಾವು ಐಹಿಕ ವಿದ್ಯೆಗಳನ್ನು ಪರಿಗ್ರಹಿಸಿ ಬ್ರಿಟಿಷ್ ಜನಗಳನ್ನು ಅತ್ಯುತ್ತಮವಾದ ಸ್ಥಿತಿಗೆ ತಂದು ನಾವೂ ಒಳ್ಳೇ ಸ್ಥಿತಿಗೆ ಬಂದು ಎಲ್ಲರೂ ಸೌಹಾರ್ದವುಳ್ಳವರಾಗಿ ಬದುಕಬೇಕು. ಈವಿಷಯದಲ್ಲಿ ನಮ್ಮ ಭಾರತೀಯರೆಲ್ಲರೂ ಆವಶ್ಯಕವಾದ ಕೃಷಿಯನ್ನು ಮಾಡುವರೆಂದುನಂಬಿ ಇದ್ದೇನೆ."

ಸಂಪೂರ್ಣ.

---

S. V Press